KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜನವರಿ ೨೭, ೨೦೧೧, (ಮಾಘ ೭, ಶಕ ವರ್ಷ ೧೯೩೨) | ಸಂಚಿಕೆ ೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದ ಸ್ವಾಯತ್ತ ವೈದ್ಯಕೀಯ/ದಂತ ವಿಜ್ಞಾನ ಸಂಸ್ಥೆಗಳಲ್ಲಿ ವಿಲೀನಗೊಂಡಿರುವ ಬೋಧಕ ಸಿಬ್ಬಂದಿಯ ವೇತನ ನಿಗದಿ, ಸೇವಾ ಷರತ್ತು ಹಾಗೂ ನಿವೃತ್ತಿ ಸೌಲಭ್ಯಗಳ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆಕುಕ 01 ಎಂಪಿಎಸ್ 1994, ದಿನಾಂಕ 11–11–1994.
2. ಸರ್ಕಾರದ ಆದೇಶ ಸಂಖ್ಯೆ : ಆಕುಕ 19 ಎಂಪಿಎಸ್ 2005, ದಿನಾಂಕ 16–11–2006 ಮತ್ತು 17–01–2007.
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 99 ಎಂಎಸ್ಎಫ್ 2003, ದಿನಾಂಕ 01–09–2003.
4. ಸರ್ಕಾರದ ಆದೇಶ ಸಂಖ್ಯೆ : ಆಕುಕ 516 ಎಂಪಿಎಸ್ 2004, ದಿನಾಂಕ 22–01–2005.
5. ಸರ್ಕಾರದ ಆದೇಶ ಸಂಖ್ಯೆ : ಆಕುಕ 105 ಎಂಎಂಸಿ 2007, ದಿನಾಂಕ 02–05–2007.
6. ಸರ್ಕಾರದ ಆದೇಶ ಸಂಖ್ಯೆ : ಆಕುಕ 277 ಎಂಎಂಸಿ 2008, ದಿನಾಂಕ 26–08–2008.
7. ಸರ್ಕಾರದ ಆದೇಶ ಸಂಖ್ಯೆ : ಆಕುಕ 277 ಎಂಎಂಸಿ 2008, ದಿನಾಂಕ 26–08–2008.
8. ಸರ್ಕಾರದ ಆದೇಶ ಸಂಖ್ಯೆ : ಆಕುಕ 277 ಎಂಎಂಸಿ 2008, ದಿನಾಂಕ 26–08–2008.
9. ಸರ್ಕಾರದ ಆದೇಶ ಸಂಖ್ಯೆ : ಆಕುಕ 277 ಎಂಎಂಸಿ 2008, ದಿನಾಂಕ 24–10–2008.
10. ಸರ್ಕಾರದ ಆದೇಶ ಸಂಖ್ಯೆ : ಆಕುಕ 277 ಎಂಎಂಸಿ 2008, ದಿನಾಂಕ 24–10–2008.
11. ಸರ್ಕಾರದ ಆದೇಶ ಸಂಖ್ಯೆ : ಆಕುಕ 73 ಕೆವಿಎಂ 2008, ದಿನಾಂಕ 07–11–2008.
12. ಸರ್ಕಾರದ ಆದೇಶ ಸಂಖ್ಯೆ : ಆಕುಕ 409 ಎಂಎಂಸಿ 2008, ದಿನಾಂಕ 29–11–2008.
13. ಸರ್ಕಾರದ ಆದೇಶ ಸಂಖ್ಯೆ : ಆಕುಕ 244 ಎಂಪಿಎಸ್ 2007, ದಿನಾಂಕ 24–12–2008.
14. ಸರ್ಕಾರದ ಆದೇಶ ಸಂಖ್ಯೆ : ಆಕುಕ 246 ಎಂಎಂಸಿ 2008, ದಿನಾಂಕ 19–02–2009.
15. ಸರ್ಕಾರದ ಆದೇಶ ಸಂಖ್ಯೆ : ಆಕುಕ 395 ಎಂಎಂಸಿ 2007, ದಿನಾಂಕ 28–02–2009.
16. ತಿದ್ದುಪಡಿ ಆದೇಶ ಸಂಖ್ಯೆ : ಆಕುಕ 395 ಎಂಎಂಸಿ 2007, ದಿನಾಂಕ 28–02–2009.
17. ಸೇರ್ಪಡೆ ಆದೇಶ ಸಂಖ್ಯೆ : ಆಕುಕ 395 ಎಂಎಂಸಿ 2007, ದಿನಾಂಕ 12–06–2009.
18. ಸೇರ್ಪಡೆ ಆದೇಶ ಸಂಖ್ಯೆ : ಆಕುಕ 395 ಎಂಎಂಸಿ 2007, ದಿನಾಂಕ 06–01–2010.
19. ಸರ್ಕಾರದ ಆದೇಶ ಸಂಖ್ಯೆ : ಆಕುಕ 395 ಎಂಎಂಸಿ 2007, ದಿನಾಂಕ 06–01–2010.
20. ಸರ್ಕಾರದ ಆದೇಶ ಸಂಖ್ಯೆ : ಆಕುಕ 277 ಎಂಎಂಸಿ 2008, ದಿನಾಂಕ 17–06–2009.
21. ಸರ್ಕಾರದ ಆದೇಶ ಸಂಖ್ಯೆ : ಆಕುಕ 9 ಎಂಎಂಸಿ 2010, ದಿನಾಂಕ 02–03–2010.

**ಪ್ರಸ್ತಾವನೆ :**

ಕರ್ನಾಟಕ ಸಂಘ ಸಂಸ್ಥೆಗಳ ನೋಂದಣಿ ಕಾಯ್ದೆ, 1960 ರಡಿ ಬೆಂಗಳೂರು ವೈದ್ಯಕೀಯ ಕಾಲೇಜು, ಮೈಸೂರು ವೈದ್ಯಕೀಯ ಕಾಲೇಜು, ಕರ್ನಾಟಕ ವೈದ್ಯಕೀಯ ಕಾಲೇಜು, ಬಳ್ಳಾರಿ ವೈದ್ಯಕೀಯ ಕಾಲೇಜು, ಸರ್ಕಾರಿ ದಂತ ಕಾಲೇಜು, ಬೆಂಗಳೂರು, ನೆಫ್ರೋ-ಯುರಾಲಜಿ ಸಂಸ್ಥೆಗಳನ್ನು ಮೇಲೆ (1) ರಿಂದ (3) ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ನೋಂದಾಯಿತ ಸರ್ಕಾರಿ ಸ್ವಾಯತ್ತ ವೈದ್ಯಕೀಯ/ದಂತ ವಿಜ್ಞಾನ ಸಂಸ್ಥೆಗಳನ್ನಾಗಿ ಪರಿವರ್ತಿಸಲಾಗಿದೆ ಮತ್ತು ಬೆಳಗಾಂ, ಬೀದರ್, ರಾಯಚೂರು, ಶಿವಮೊಗ್ಗ, ಹಾಸನ ಮತ್ತು ಮಂಡ್ಯ ವೈದ್ಯಕೀಯ ವಿಜ್ಞಾನ ಸಂಸ್ಥೆಗಳನ್ನು ಮೇಲೆ (4) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸ್ಥಾಪಿಸಲಾಗಿದೆ.

ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಸ್ವಾಯತ್ತ ಸಂಸ್ಥೆಗಳನ್ನಾಗಿ ಪರಿವರ್ತಿಸುವ ಮೊದಲು ಆಯಾ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ವೈದ್ಯಕೀಯ ಶಿಕ್ಷಣ ಸೇವಾ ಅಧಿಕಾರಿಗಳನ್ನು ಮತ್ತು ಸ್ವಾಯತ್ತ ಸಂಸ್ಥೆಗಳಾಗಿ ಪರಿವರ್ತನೆ/ಸ್ಥಾಪನೆಯಾದ ನಂತರ, ನಿಯೋಜನೆ ಮೇಲೆ ಸ್ವಾಯತ್ತ

ವೈದ್ಯಕೀಯ/ದಂತ ವಿಜ್ಞಾನಗಳ ಸಂಸ್ಥೆಗಳಲ್ಲಿ ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ಮತ್ತು ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಯ ವೈದ್ಯಾಧಿಕಾರಿಗಳ ಸೇವೆಯನ್ನು ಮೇಲೆ (5) ರಿಂದ (21) ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ಆಯಾ ಸ್ವಾಯತ್ತ ಸಂಸ್ಥೆಗಳ ಸೇವೆಯಲ್ಲಿ ಅವರು ಸರ್ಕಾರಿ ಸೇವೆಯಲ್ಲಿ ಮುಂದುವರಿದಿದ್ದರೆ ಅನ್ವಯಿಸುವ ನಿವೃತ್ತಿ ವೇತನ ನಿಯಮಗಳು ಅನ್ವಯಿಸುವ ಷರತ್ತಿಗೊಳಪಟ್ಟು ಮತ್ತು ಕೆಲವರಿಗೆ ಪ್ರೊರೇಟಾ ಪಿಂಚಣಿ ಅನ್ವಯಿಸುವ ಷರತ್ತಿಗೊಳಪಟ್ಟು ವಿಲೀನಗೊಳಿಸಲಾಗಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಸರ್ಕಾರಿ ಸ್ವಾಯತ್ತ ಸಂಸ್ಥೆಗಳ ಸೇವೆಯಲ್ಲಿ ವಿಲೀನವಾಗಿರುವ ವೈದ್ಯಕೀಯ ಶಿಕ್ಷಣ ಸೇವಾಧಿಕಾರಿಗಳಿಗೆ ಅವರು ಸರ್ಕಾರಿ ಸೇವೆಯಲ್ಲಿ ಮುಂದುವರಿದಿದ್ದರೆ ಯಾವ ಸೇವಾ ಸವಲತ್ತುಗಳು ಲಭ್ಯವಿದ್ದವು ಅಂತಹ ಸವಲತ್ತುಗಳನ್ನು ಮುಂದುವರಿಸಲು ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಹಾಗೂ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವಾ ಅಧಿಕಾರಿಗಳಿಗೆ ಪ್ರೊರೇಟಾ ಪಿಂಚಣಿಯನ್ನು ಅನ್ವಯಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 277 ಎಂಎಂಇ 2008, ಬೆಂಗಳೂರು, ದಿನಾಂಕ: 21–09–2010**

ಸರ್ಕಾರಿ ಸ್ವಾಯತ್ತ ವೈದ್ಯಕೀಯ/ದಂತ ವಿಜ್ಞಾನ ಸಂಸ್ಥೆಗಳಲ್ಲಿ ಸೇವೆಯನ್ನು ವಿಲೀನಗೊಳಿಸಲ್ಪಟ್ಟಿರುವ ವೈದ್ಯಕೀಯ ಶಿಕ್ಷಣ ಸೇವೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆ ಮತ್ತು ಕಾರ್ಮಿಕ ರಾಜ್ಯ ವಿಮಾ ಸೇವಾ ಅಧಿಕಾರಿಗಳ ನಿವೃತ್ತಿ ಉಪದಾನ ಮತ್ತು ಇತರೆ ಸೇವಾ ಸವಲತ್ತುಗಳನ್ನು ಈ ಕೆಳಗಿನಂತೆ ನಿಯಂತ್ರಿಸಲು ಆದೇಶಿಸಲಾಗಿದೆ.

1. **ವೈದ್ಯಕೀಯ ಶಿಕ್ಷಣ ಸೇವಾ ಅಧಿಕಾರಿಗಳು :**
   1. ದಿನಾಂಕ 01–04–2006 ರ ಮೊದಲು ನೇಮಕಗೊಂಡಿರುವವರಿಗೆ ಅವರು ಸರ್ಕಾರಿ ಸೇವೆಯಲ್ಲಿ ಮುಂದುವರಿದಿದ್ದರೆ ಯಾವ ಯಾವ ಪಿಂಚಣಿ ನಿಯಮಗಳು ಅನ್ವಯಿಸುತ್ತಿದ್ದವೋ ಆ ಪಿಂಚಣಿ ನಿಯಮಗಳು ಅನ್ವಯಿಸತಕ್ಕದ್ದು.
   2. ಇವರ ನಿವೃತ್ತಿ ಉಪದಾನಗಳನ್ನು ಕರ್ನಾಟಕದ ಮಹಾಲೇಖಪಾಲರು ಇತ್ಯರ್ಥಗೊಳಿಸತಕ್ಕದ್ದು.
   3. ಇದಕ್ಕೆ ತಗಲುವ ವೆಚ್ಚವನ್ನು 2071 Pension and other retirement benefits 01 Civil-200-other pension–0202 ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.
   4. GPF, KGID ಮತ್ತು EGIS ಯೋಜನೆಗಳು ಯಥಾವತ್ತಾಗಿ ಮುಂದುವರಿಯತಕ್ಕದ್ದು.
   5. GPF, KGID ಮತ್ತು EGIS ಯೋಜನೆಗಳ ವಂತಿಗೆಗಳನ್ನು ಕ್ರಮಬದ್ಧವಾಗಿ ನೌಕರರಿಂದ ವಸೂಲು ಮಾಡಿ ನಿಗದಿತ ಸಮಯದೊಳಗೆ ಸರ್ಕಾರಕ್ಕೆ ಸಂದಾಯಿಸಲು ಸಂಬಂಧಿಸಿದ ಸ್ವಾಯತ್ತ ಸಂಸ್ಥೆಯ ನಿರ್ದೇಶಕರು ಜವಾಬ್ದಾರರಾಗಿರತಕ್ಕದ್ದು.
   6. ವಿಲೀನ ಪೂರ್ವದಲ್ಲಿ ಇವರು ಪಡೆಯುತ್ತಿದ್ದ 1999 ರ ಎಐಸಿಟಿಇ ವೇತನ ಶ್ರೇಣಿಯಲ್ಲೇ ವಿಲೀನದ ನಂತರವೂ ಮುಂದುವರಿಯತಕ್ಕದ್ದು.
2. **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ಮತ್ತು ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವಾ ಅಧಿಕಾರಿಗಳು :**
   1. ಇವರು ಸರ್ಕಾರದಡಿ ಸಲ್ಲಿಸಿರುವ ಸೇವೆಗೆ ಪ್ರೊರೇಟಾ ಪೆನ್ಷನ್ ಮಾತ್ರ ಅರ್ಹವಿರತಕ್ಕದ್ದು.
   2. ಇವರ ನಿವೃತ್ತಿ, ಉಪದಾನಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 235 (ಎ) ಉಪಬಂಧಗಳಡಿ ನಿಯಂತ್ರಿಸತಕ್ಕದ್ದು.
   3. ಮೇಲಿನ ಅಂಶ (1) ಮತ್ತು (2) ರಂತೆ ಸರ್ಕಾರದ ಆದೇಶ ಸಂಖ್ಯೆ : ಆಕುಕ 244 ಎಂಪಿಎಸ್ 2007, ದಿನಾಂಕ 24–12–2008 ರ ಷರತ್ತುಗಳು ತಂತಾನೆ ಮಾರ್ಪಟ್ಟಿರುತ್ತದೆ.
   4. ವಿಲೀನಪೂರ್ವದಲ್ಲಿ 2005 ರ ಮೊದಲು ಪಡೆಯುತ್ತಿದ್ದ 1999 ರ ರಾಜ್ಯ ವೇತನ ಶ್ರೇಣಿಗೆ ಅನುಸಾರವಾಗಿ ಎಐಸಿಟಿಇ ವೇತನ ಶ್ರೇಣಿಯಲ್ಲಿ ಇವರ ವೇತನವನ್ನು ನಿಯಂತ್ರಿಸತಕ್ಕದ್ದು.
   5. ಇವರ ವೇತನವನ್ನು ಎಐಸಿಟಿಇ ವೇತನ ಶ್ರೇಣಿಯಲ್ಲಿ ನಿಯಂತ್ರಿಸುವಾಗ 2007 ರ ವೇತನ ಶ್ರೇಣಿಯಲ್ಲಿ ತಜ್ಞರು ಮತ್ತು ಹಿರಿಯ ತಜ್ಞರಾಗಿ ಹುದ್ದೆಗಳಲ್ಲಿ ಪಡೆಯುತ್ತಿದ್ದ ವೇತನವನ್ನು ವೈಯಕ್ತಿಕ ವೇತನವೆಂದು ಸಂರಕ್ಷಿಸತಕ್ಕದ್ದು.
   6. ಕಾಲಮಿತಿ ಮುಂಬಡ್ತಿ ಯೋಜನೆಯಡಿ ಹೊಂದಿದ್ದ ತಜ್ಞರು ಮತ್ತು ಹಿರಿಯ ತಜ್ಞರು ಹುದ್ದೆಗಳನ್ನು ವಿಲೀನವಾದಾಗ ಸ್ವಾಯತ್ತ ಸಂಸ್ಥೆಗಳ ಉನ್ನತ ಬೋಧನಾ ವೃಂದಗಳೊಂದಿಗೆ ಸಮೀಕರಿಸತಕ್ಕದ್ದಲ್ಲ.
   7. ಇವರನ್ನು ಪ್ರಾರಂಭಿಕ ಬೋಧನಾ ವೃಂದಗಳಲ್ಲಿ ಮಾತ್ರ ವಿಲೀನಗೊಳಿಸತಕ್ಕದ್ದು ಮತ್ತು ಆ ಪ್ರಕಾರ ಅವರ ವೇತನವನ್ನು ನಿಯಂತ್ರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್ ಡಿ 644 ಸೇವೆಗಳು–1/10, ದಿನಾಂಕ: 17–07–2010 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬಿ. ಧನಂಜಯಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

ಪಿ.ಆರ್.2761

## FOREST, ENVIRONMENT AND ECOLOGY SECRETARIAT

**Sub :** Amendment to the Karnataka State Pollution Control Board, Cadre, Recruitment and Conditions of Service Regulations. 1992-Upgradation of the post of Senior Environmental Officer to Chief Environmental Officer in KSPCB – issue of orders-reg.

**Read :**
1. G.O. No. FEE 1 EPC 2003 Dated : 21-4-2006.
2. KSPCB letter No. : ಮಾನಿಮಾ/14/ಅಡೆಎ/08/390 ಜಣ : 16–07–2010.

**Preamble:**

In Government Order read at (I) above, Government had brought in amendments to the Karnataka State Pollution Control Board, Cadre, Recruitment and Conditions of Service Regulations, 1992 by upgrading two post's of Senior Environmental Officer's (SEO) and thus creating two posts of Chief Environmental Officer's (CEO) in the KSPCB, Bangalore.

In the letter read at (2) above, the Karnataka State Pollution Control Board has reported that the Board in its meeting held on 21-5-2010 has resolved to create one more post of Chief Environmental Officer in KSPCB. There are totally three sanctioned posts of Senior Environmental Officer's in KSPCB. After examining the matter at Government level, it has been decided to agree with the recommendation of the Board to upgrade one post of Senior Environmental Officer to that of Chief Environmental Officer by amending the Karnataka State Pollution Control Board, Cadre, Recruitment and Conditions of Service Regulations, 1992. Hence the Order.

**Government Order No. FEE 130 EPC 2010, Bangalore, Dated: 27-10- 2010**

In the facts and circumstances explained in the preamble and in exercise of powers conferred under Section 12 (3A) (b) of the Water (Prevention and Control of Pollution) Act. 1974, Government is pleased to accord sanction for upgradation of one post of Senior Environmental Officer to that of Chief Environmental Officer in Karnataka State Pollution Control Board in the scale of Rs. 22,125-30,300. Consequently, the number of sanctioned posts of Senior Environmental Officer shall stand reduced from three to two and the number of posts of Chief Environmental Officer being enhanced from two to three.

The pay scales attached to the post, qualification/experience and the mode of filling up of these upgraded posts shall continue to be governed by the G.O. read at (1) above.

The Karnataka State Pollution Control Board shall issue a separate Notification on the above lines in terms of Section 12 (3A) of the Water (Prevention and Control of Pollution) Act, 1974.

The expenditure, consequent to this proposal, shall be borne entirely by the Board (KSPCB), and no financial liability whatsoever shall lie with the Government in this regard.

By Order and in the name of the Governor of Karnataka,

PR. 2762

**B. MANOHAR**

Under Secretary to Government

Forest, Environment and Ecology Dept.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಯೋಜನೆಯಡಿ "ಬಾಲಸಂಜೀವಿನಿ" ಎಂಬ ಹೊಸ ಉಪಯೋಜನೆಯನ್ನು ಅಳವಡಿಸಿ ಪರಿಷ್ಕರಿಸಿದ ಆದೇಶ.

**ಓದಲಾಗಿದೆ :**
1. ದಿನಾಂಕ : 30–08–2007 ಮತ್ತು 04–12–2007 ರ ಸರ್ಕಾರಿ ಆದೇಶ ಸಂಖ್ಯೆ : ಮಮಇ 102 ಐಸಿಡಿ 2007.
2. ದಿನಾಂಕ : 15–04–2010 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಪ್ರಸ್ತಾವನೆ ಸಂಖ್ಯೆ : ಮಮಅಇ : ಯೋಜನೆ–03–10–11.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (i) ದಿನಾಂಕ : 30–08–2007 ರ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾಗುವ ಮಕ್ಕಳ ಪೈಕಿ 3ನೇ ಗ್ರೇಡಿನ ಹಾಗೂ 4ನೇ ಗ್ರೇಡಿನ ಮಕ್ಕಳಿಗೆ, ವೈದ್ಯರು ಖಾಸಗಿ ಔಷಧಿ ಅಂಗಡಿಗಳಿಂದ ಖರೀದಿಸಲು ಸಲಹೆ ನೀಡುವಂತಹ ಪ್ರಕರಣಗಳಲ್ಲಿ ಪ್ರತಿ ಮಗುವಿಗೆ ಗರಿಷ್ಠ ರೂ. 750/– ರಂತೆ ಔಷದೋಪಚಾರ ಹಾಗೂ ಇತರೆ ವೈದ್ಯಕೀಯ ವೆಚ್ಚಗಳಿಗಾಗಿ ಭರಿಸಲು "ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚಗಳನ್ನು ಭರಿಸುವ ಯೋಜನೆ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿರುತ್ತದೆ. ಈಗಾಗಲೇ ದಿನಾಂಕ : 04–12–2007ರ ಆದೇಶದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸುವ ಮಾರ್ಗಸೂಚಿಯನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2) ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಸ್ತಾವನೆಯಲ್ಲಿ ಕೇಂದ್ರ ಪುರಸ್ಕೃತ ಶಿಶು ಅಭಿವೃದ್ಧಿ ಯೋಜನೆಯಡಿ 0–6 ವರ್ಷ ವಯೋಮಿತಿಯಲ್ಲಿರುವ ಅಂಗನವಾಡಿ ಕೇಂದ್ರಗಳಲ್ಲಿನ ಬಿ.ಪಿ.ಎಲ್. ವರ್ಗದ ಅನಾರೋಗ್ಯ ಪೀಡಿತ, 3ನೇ ದರ್ಜೆಯ ಚಿಕಿತ್ಸೆಯ ಅವಶ್ಯಕತೆ ಇರುವ ನ್ಯೂನ್ಯ ಪೋಷಣೆಗೆ ಒಳಗಾಗಿರುವ ಮಕ್ಕಳಿಗೆ ಆಯ್ದ 5 ಆಸ್ಪತ್ರೆಗಳಲ್ಲಿ ಚಿಕಿತ್ಸೆ ನೀಡಿದಲ್ಲಿ, ಉಚಿತ ಸೇವೆಯನ್ನು ಹೊರತುಪಡಿಸಿ ಉಳಿದ ಚಿಕಿತ್ಸೆಗೆ (3ನೇ ದರ್ಜೆಯ ಚಿಕಿತ್ಸೆಯ ಅವಶ್ಯಕತೆ ಇರುವ) ಮಗುವಿಗೆ ಗರಿಷ್ಠ ರೂ. 35,000/– ಹಾಗೂ ನವಜಾತ ಶಿಸ್ತು ಆರೈಕೆ ಮತ್ತು ಚಿಕಿತ್ಸೆಗೆ ರೂ. 50,000/– ಗಳ ಮೊತ್ತವನ್ನು ಭರಿಸಲು ಉದ್ದೇಶಿಸಲಾಗಿದೆ. ಆಸ್ಪತ್ರೆಗಳಲ್ಲಿ ಭರ್ತಿಯಾಗಿ ಅವಕಾಶ ಇಲ್ಲದಿದ್ದಲ್ಲಿ ಸದರಿ ಆಸ್ಪತ್ರೆಗಳು ಸೂಚಿಸುವ ಇತರೆ ಚಿಕಿತ್ಸಾಲಯಗಳಲ್ಲಿ ಚಿಕಿತ್ಸೆ ನೀಡಬಹುದಾಗಿದ್ದು, ಈ ಯೋಜನೆಯಡಿ 14 ವಿವಿಧ ರೀತಿಯ ಖಾಯಿಲೆಗೆ ಚಿಕಿತ್ಸೆ ಕೊಡಿಸಲು ಈಗಾಗಲೇ ಅನುಷ್ಠಾನದಲ್ಲಿರುವ ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚವನ್ನು ಭರಿಸುವ ಯೋಜನೆಯಡಿ 'ಬಾಲಸಂಜೀವಿನಿ' ಎಂಬ ಉಪಯೋಜನೆಯನ್ನು ಅಳವಡಿಸಿ ಯೋಜನೆಯನ್ನು ಪರಿಷ್ಕರಿಸಿ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿರುತ್ತದೆ.

ಈ ಯೋಜನೆಗೆ ರೂ. 550.00 ಲಕ್ಷ ಆಯವ್ಯಯವನ್ನು ಒದಗಿಸಿದ್ದು, ರೂ. 50.00 ಲಕ್ಷ ಮೊತ್ತವನ್ನು ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಮೂಲಕ ಯೋಜನೆಗೆ ಹಾಗೂ ರೂ. 500.00 ಲಕ್ಷ ಮೊತ್ತವನ್ನು ಬಾಲಸಂಜೀವಿನಿ ಎಂಬ ಉಪಯೋಜನೆಗೆ ಭರಿಸಲು ಉದ್ದೇಶಿಸಿದ್ದು, ಈ ಪರಿಷ್ಕೃತ ಯೋಜನೆಯ ಮಾರ್ಗಸೂಚಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಆದೇಶ ಸಂಖ್ಯೆ: ಮಮಇ 126 ಐಸಿಡಿ 2010, ಬೆಂಗಳೂರು ದಿನಾಂಕ: 21–10–2010**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈಗಾಗಲೇ ಅನುಷ್ಠಾನದಲ್ಲಿರುವ ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಯೋಜನೆ ಅಡಿಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವ ಮಾರ್ಗಸೂಚಿಯನ್ವಯ 'ಬಾಲಸಂಜೀವಿನಿ' ಎಂಬ

ಉಪಯೋಜನೆಯನ್ನು ಅಳವಡಿಸಿ ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ಹಾಗೂ ಅವರು ಸರಬರಾಜು ಮಾಡುವ ಔಷದೋಪಚಾರಗಳನ್ನು ಪಡೆದುಕೊಳ್ಳುವ ಷರತ್ತಿಗೊಳಪಟ್ಟು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ದಿನಾಂಕ : 13–05–2010 ರ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ : 302 : ವೆಚ್ಚ–02/10 ರಲ್ಲಿ ನೀಡಿರುವ ಸಹಮತದೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ

**(ಆದೇಶ ಸಂಖ್ಯೆ: ಮಮಇ 126 ಐಸಿಡಿ 2010 ಬೆಂಗಳೂರು, ದಿನಾಂಕ: 21–10–2010ಕ್ಕೆ ಮಾರ್ಗಸೂಚಿ)**

**I. ಯೋಜನೆಯ ಉದ್ದೇಶ :**

1. ಅಪೌಷ್ಠಿಕತೆಯಿಂದ ನರಳುತ್ತಿರುವ ಮಕ್ಕಳನ್ನು ಗುರುತಿಸಿ, ಆ ಮಕ್ಕಳಿಗೆ ಅವಶ್ಯಕವಿರುವ ಚಿಕಿತ್ಸೆ ಹಾಗೂ ಆರೈಕೆಯನ್ನು ನೀಡುವುದು.
2. ಮಕ್ಕಳನ್ನು ಆರೋಗ್ಯವಂತರನ್ನಾಗಿಸುವುದು.
3. ಮಕ್ಕಳ ತಾಯಂದಿರಿಗೆ ಶಿಕ್ಷಣ ನೀಡುವುದರ ಮೂಲಕ ಅವರನ್ನು ಸಬಲರನ್ನಾಗಿಸುವುದು.
4. ಆರೋಗ್ಯ ಸೇವೆಗಳ ಮೂಲಕ ಹಾಗೂ ಉತ್ತಮ ಪೌಷ್ಠಿಕ ಆಹಾರ ಒದಗಿಸುವ ಮೂಲಕ ಸಶಕ್ತರನ್ನಾಗಿಸುವುದು.

**II. ಯೋಜನೆಯ ವ್ಯಾಪ್ತಿಗೆ ಒಳಪಡುವವರು :**

1. ಫಲಾನುಭವಿ ಅಂಗನವಾಡಿ ಕೇಂದ್ರದಲ್ಲಿ ದಾಖಲಾಗಿರಬೇಕು.
2. ಫಲಾನುಭವಿ 0–6 ವರ್ಷದ ವಯೋಮಿತಿಯಲ್ಲಿರಬೇಕು.
3. ಅನಾರೋಗ್ಯ ಪೀಡಿತ, ನ್ಯೂನ್ಯ ಪೋಷಣೆಗೆ ಒಳಗಾಗಿರುವ ಮಕ್ಕಳು.
4. ಬಿಪಿಎಲ್ ವರ್ಗಕ್ಕೆ ಸೇರಿದವರಾಗಿರಬೇಕು.

**III. ಯೋಜನೆಯ ಅನುಷ್ಠಾನ : (ಆಯ್ದ ಆಸ್ಪತ್ರೆಗಳ ಮೂಲಕ) :**

ಅಪೌಷ್ಠಿಕ ಹಾಗೂ ತೀವ್ರತರ ಕಾಯಿಲೆಯಿಂದ ಬಳಲುತ್ತಿರುವ ಮಕ್ಕಳಿಗೆ ಚಿಕಿತ್ಸೆ ನೀಡುವ ಕೇಂದ್ರವನ್ನು ಹಾಗೂ ಪಾಲಕರಿಗೆ ಮಾಹಿತಿ ನೀಡುವಂತಹ ಕೇಂದ್ರವನ್ನಾಗಿ ಗುರುತಿಸಲು ಪ್ರಾರಂಭಿಕವಾಗಿ ರಾಜ್ಯದ 5 ವಿಭಾಗಗಳಲ್ಲಿ ಅಂದರೆ, ಬೆಂಗಳೂರು, ದಾವಣಗೆರೆ, ಬೆಳಗಾಂ, ಗುಲ್ಬರ್ಗ ಮತ್ತು ಮಂಗಳೂರುಗಳಲ್ಲಿ ಈ ಕೆಳಕಂಡ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಬೇಕು.

1. ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು–ಬೆಂಗಳೂರು (ನಗರ), ಬೆಂಗಳೂರು (ಗ್ರಾಮಾಂತರ), ಮೈಸೂರು, ಮಂಡ್ಯ, ಕೊಡಗು, ಕೋಲಾರ, ಚಾಮರಾಜನಗರ, ಹಾಸನ, ಚಿಕ್ಕಮಗಳೂರು, ತುಮಕೂರು, ಚಿಕ್ಕಬಳ್ಳಾಪುರ, ರಾಮನಗರ ಜಿಲ್ಲೆಗಳು ಸೇರ್ಪಡೆಯಾಗಿರುತ್ತದೆ.
2. ಬಾಪೂಜಿ ಮಕ್ಕಳ ಆರೋಗ್ಯ ಸಂಸ್ಥೆ, ದಾವಣಗೆರೆ–ಶಿವಮೊಗ್ಗ, ದಾವಣಗೆರೆ, ಹಾವೇರಿ, ಕೊಪ್ಪಳ ಮತ್ತು ಚಿತ್ರದುರ್ಗ.
3. ಡಾ. ಪ್ರಭಾಕರ ಕೋರೆ ಫ್ರೀ ಆಸ್ಪತ್ರೆ, ಬೆಳಗಾಂ–ಧಾರವಾಡ, ಬೆಳಗಾಂ, ಬಳ್ಳಾರಿ, ಬಾಗಲಕೋಟೆ, ಬಿಜಾಪುರ ಮತ್ತು ಗದಗ.
4. ಎಂ.ಆರ್. ಮೆಡಿಕಲ್ ಕಾಲೇಜ್, ಗುಲ್ಬರ್ಗ–ಬೀದರ್, ಗುಲ್ಬರ್ಗ ಮತ್ತು ರಾಯಚೂರು.
5. ಮಣಿಪಾಲ್ ಆಸ್ಪತ್ರೆ, ಮಣಿಪಾಲ್–ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು ಸೇರ್ಪಡೆಯಾಗಿವೆ.

ವಿಶೇಷ ಸಂದರ್ಭಗಳಲ್ಲಿ ಯಾವುದೇ ಜಿಲ್ಲೆಯ ಮಗುವನ್ನು ಮೇಲಿನ 5 ಘಟಕಗಳ ಪೈಕಿ ಯಾವುದೇ ಘಟಕದಲ್ಲಿ ಚಿಕಿತ್ಸೆ ನೀಡಬಹದಾಗಿರುತ್ತದೆ. ಮಗುವು ಒಳರೋಗಿಯಾಗಿ ದಾಖಲಿಸ್ಪಟ್ಟಲ್ಲಿ ದಾಖಲಿಸುವ ಹಾಗೂ ವೈದ್ಯರ ಸೇವೆಯ ವೆಚ್ಚವನ್ನು (ಕೊಠಡಿಯ ಹಾಸಿಗೆಯ ಬಾಡಿಗೆ) ಮೇಲಿನ ಘಟಕಗಳು ಉಚಿತವಾಗಿ ಭರಿಸುತ್ತವೆ.

ಈ ಘಟಕದಲ್ಲಿ ಪ್ರಾರಂಭಿಕವಾಗಿ ಸುಮಾರು 500 ಫಲಾನುಭವಿಗಳಿಗೆ ಒಂದು ವರ್ಷಕ್ಕೆ ಚಿಕಿತ್ಸೆ ನೀಡಬಹುದಾಗಿರುತ್ತದೆ.

**IV. ಈ ಕೆಳಕಂಡ ತೀವ್ರತರ ಖಾಯಿಲೆಗಳಿಂದ ನರಳುತ್ತಿರುವ 0–6 ವರ್ಷದ ಅಂಗನವಾಡಿ ಕೇಂದ್ರದ ಮಕ್ಕಳು ಈ ಯೋಜನೆಯ ಸೌಲಭ್ಯ ಪಡೆಯಬಹುದಾಗಿದೆ:**

1. ತೀವ್ರತರ ನಿಮೋನಿಯ
2. ಎನ್ಸೆಫಿಲೈಟಿಸ್ – ಮೆನ್ಜಿಟಿಸ್
3. ಕ್ಲಿಷ್ಟಕರ ಮಲೇರಿಯ
4. ಅನಿಮಿಯ – (ರಕ್ತಹೀನತೆ)
5. ಡಯಾಬಿಟಿಕ್ (ಮಧುಮೇಹ)
6. ರೀನಲ್ ಸಮಸ್ಯೆಗಳು – ಮೂತ್ರಕೋಶ/ಕಿಡ್ನಿ ಸಮಸ್ಯೆ
7. ನವಜಾತ ಶಿಶುವಿನ ಲೆವೆಲ್ – 3 ಚಿಕಿತ್ಸೆ
8. ಲಿವರ್ ತೊಂದರೆ
9. ನ್ಯುರೊಲಾಜಿಕಲ್ ಡಿಸಾರ್ಡರ್ಸ್
10. ಸೆಕೆಂಡರಿ ಮಾಲ್ ನ್ಯೂಟ್ರಿಷನ್
11. ಕ್ಲಿಷ್ಟ ಅತಿಸಾರ
12. ನವಜಾತ ಶಿಶುವಿನ ಶಸ್ತ್ರ ಚಿಕಿತ್ಸೆ
13. ವಿಷಜಂತು ಕಡಿತಕ್ಕೆ ಚಿಕಿತ್ಸೆ (ಹಾವು)
14. ವಿಷ ಸೇವನೆ

**V. ಚಿಕಿತ್ಸೆ ಅವಶ್ಯವಿರುವ ಮಗುವಿನ ದಾಖಲಾತಿ ವಿವರ :**

1. ಈ ಯೋಜನೆಯಡಿ ಬರುವ ಮಗುವನ್ನು ಗುರುತಿಸುವ ಜವಾಬ್ದಾರಿ ಅಂಗನವಾಡಿ ಕಾರ್ಯಕರ್ತೆ/ಮೇಲ್ವಿಚಾರಕಿ/ಸಿಡಿಪಿಓ ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರ/ಪ್ರಾಥಮಿಕ ಆರೋಗ್ಯ ಘಟಕದ ವೈದ್ಯರದ್ದಾಗಿರುತ್ತದೆ.
2. ಗುರುತಿಸಿದ ಮಗುವನ್ನು ರೆಫರಲ್ ಕಾರ್ಡಿನೊಂದಿಗೆ ಆಸ್ಪತ್ರೆಗೆ ಅಂಗನವಾಡಿ ಕಾರ್ಯಕರ್ತೆ/ಮೇಲ್ವಿಚಾರಕಿಯರು ದಾಖಲಿಸುವುದು.
3. ರೆಫರಲ್ ಕಾರ್ಡಿನಲ್ಲಿ ಅಂಗನವಾಡಿ ಕಾರ್ಯಕರ್ತೆ/ಮೇಲ್ವಿಚಾರಕಿ/ಸಿಡಿಪಿಓ ಹಾಗೂ ವೈದ್ಯಾಧಿಕಾರಿಗಳು ರುಜು ಮಾಡಬೇಕು.
4. ಮಗುವನ್ನು ಮೊದಲಿನಿಂದಲೂ ಪ್ರಾಥಮಿಕ ಆರೋಗ್ಯ ಕೇಂದ್ರ/ಪ್ರಾಥಮಿಕ ಆರೋಗ್ಯ ಘಟಕದ ವೈದ್ಯಾಧಿಕಾರಿಗಳು ಪರಿಶೀಲಿಸಿ ಅಂಗನವಾಡಿ ಕೇಂದ್ರದ ಆರೋಗ್ಯ ತಪಾಸಣಾ ಇಲ್ಲವೇ ಶಿಫಾರಸ್ಸಿನಲ್ಲಿ ರೆಫರ್ ಮಾಡಲು ಸೂಚಿಸಿದಲ್ಲಿ ರೆಫರಲ್ ಕಾರ್ಡಿನಲ್ಲಿ ರುಜು ಪಡೆಯುವ ಅವಶ್ಯಕತೆ ಇರುವುದಿಲ್ಲ.
5. ತುರ್ತು ಸಂದರ್ಭದಲ್ಲಿ ಅಂಗನವಾಡಿ ಕಾರ್ಯಕರ್ತೆಯೊರೊಬ್ಬರೇ ನೇರವಾಗಿ ಮಕ್ಕಳನ್ನು ಗೊತ್ತುಪಡಿಸಿದ ಆಸ್ಪತ್ರೆಗೆ ಕಳುಹಿಸಬಹುದಾಗಿದ್ದು ಅಂತಹ ಸಂದರ್ಭದಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು/ಮೇಲ್ವಿಕಾರಕಿಯರು ಆಸ್ಪತ್ರೆಗೆ ಭೇಟಿ ನೀಡಿ ರೆಫರಲ್ ಕಾರ್ಡಿನಲ್ಲಿ ರುಜು ಮಾಡಬೇಕು.
6. ರೆಫರಲ್ ಕಾರ್ಡಿನೊಂದಿಗೆ ಬಿಪಿಎಲ್ ಕಾರ್ಡ್, ಮಗುವಿನ ಭಾವಚಿತ್ರ ಲಗತ್ತಿಸಿರಬೇಕು.
7. ಅಂಗನವಾಡಿ ಕಾರ್ಯಕರ್ತೆಯರು ಹಾಗೂ ಐಸಿಡಿಎಸ್‌ನ ಯಾವುದೇ ಕರ್ಮಚಾರಿಗಳ ಸಹಿ ಇಲ್ಲದೇ ಯಾವುದೇ ಮಗುವು ಆಸ್ಪತ್ರೆಗೆ ದಾಖಲಾದಲ್ಲಿ ಆಸ್ಪತ್ರೆಯ ಆಡಳಿತ ವರ್ಗವು ಅಂಗನವಾಡಿ ಕೇಂದ್ರದಲ್ಲಿ ದಾಖಲಾದ ಬಗ್ಗೆ ಹಾಗೂ ಮಗು ಬಿಪಿಎಲ್ ಕುಟುಂಬಕ್ಕೆ ಒಳಪಡುವ ಬಗ್ಗೆ ದೃಢೀಕರಿಸಿಕೊಂಡು ನಂತರದಲ್ಲಿ ಸಿಡಿಪಿಓ ರವರಿಂದ ದೃಢೀಕರಣ ಪ್ರಮಾಣ ಪತ್ರ ಪಡೆಯಬಹುದಾಗಿರುತ್ತದೆ.
8. ಈಗಾಗಲೇ ಆಯ್ಕೆಯಾದ 5 ಆಸ್ಪತ್ರೆಗಳಲ್ಲಿ ವೆಂಟಿಲೇಟರ್, ಆಕ್ಸಿಝಿನ್ ಮುಂತಾದ ಸೌಲಭ್ಯಗಳನ್ನು ಹೊಂದಿದ್ದು, ಒಂದು ವೇಳೆ ಈ ಆಸ್ಪತ್ರೆಗಳಲ್ಲಿ ಸ್ಥಳಾವಕಾಶ ಇಲ್ಲದೇ ಇದ್ದ ಸಮಯದಲ್ಲಿ ಕೆಲವು ರೋಗಿಗಳನ್ನು ಬೇರೆ ಆಸ್ಪತ್ರೆಗೆ ಕಳುಹಿಸುವಾಗ ಈಗಾಗಲೇ ಆಯ್ಕೆ ಮಾಡಲಾದ ಆಸ್ಪತ್ರೆಗಳವರು ಇಂತಹದೇ ಸೌಲಭ್ಯ ಹೊಂದಿರುವ ಹತ್ತಿರದ ವೈದ್ಯಕೀಯ ಶಿಕ್ಷಣ ಸಂಸ್ಥೆಗಳು ಅಥವಾ ಆಸ್ಪತ್ರೆಗಳನ್ನು ಗುರುತಿಸಿ ಇಂತಹ ರೋಗಿಗಳನ್ನು ಆ ಆಸ್ಪತ್ರೆಗೆ ಕಳುಹಿಸುವ ವ್ಯವಸ್ಥೆ ಮಾಡಬೇಕು. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು/ಉಪನಿರ್ದೇಶಕರು ಆಸ್ಪತ್ರೆಗೆ ರೋಗಿಗಳನ್ನು ಕಳುಹಿಸುವ ಮೊದಲು ಆಸ್ಪತ್ರೆಯ ಮುಖ್ಯಸ್ಥರೊಂದಿಗೆ ದೂರವಾಣಿಯ ಮುಖಾಂತರ ಸಂಪರ್ಕಿಸಿ ಆಸ್ಪತ್ರೆಗಳಲ್ಲಿ ಸ್ಥಳಾವಕಾಶ ಇರುವ ಕುರಿತು ಖಚಿತಪಡಿಸಿಕೊಂಡು, ಒಂದು ವೇಳೆ ಆಯ್ದ ಆಸ್ಪತ್ರೆಗಳಲ್ಲಿ ಸ್ಥಳಾವಕಾಶ ಇಲ್ಲದ ಸಂದರ್ಭದಲ್ಲಿ ಆ ಆಸ್ಪತ್ರೆ ಗುರುತಿಸಿದ ಹತ್ತಿರದ ಆಸ್ಪತ್ರೆಗಳಲ್ಲಿ ವ್ಯವಸ್ಥೆ ಮಾಡುವುದು.

**VI. ಅನುದಾನದ ವಿವರ :**

1. 3ನೇ ಹಂತದ (Tertiary care) ಚಿಕಿತ್ಸೆ ಅವಶ್ಯವಿರುವ ಮಗುವಿಗೆ ಗರಿಷ್ಠ ರೂ. 35,000/– ಹಾಗೂ ನವಜಾತ ಶಿಶು ಆರೈಕೆ ಮತ್ತು ಚಿಕಿತ್ಸೆಗೆ ಪ್ರತಿ ಮಗುವಿಗೆ ಗರಿಷ್ಠ ರೂ. 50,000/– ದಂತೆ ವೆಚ್ಚ ಭರಿಸಬಹುದು (Subject to Actuals).
2. ಗರಿಷ್ಠ ರೂ. 35,000/– ಹಾಗೂ ಗರಿಷ್ಠ ರೂ. 50,000/– ಚಿಕಿತ್ಸಾವೆಚ್ಚ ಮಾತ್ರವಾಗಿದ್ದು ಅದರಲ್ಲಿ ಮಗು ಹಾಗೂ ಮಗುವಿನ ಪೋಷಕರೊಬ್ಬರ ಪ್ರಯಾಣ ವೆಚ್ಚ; ಹಾಗೂ ದಿನಭತ್ಯ ಒಳಗೊಂಡಿರುವುದಿಲ್ಲ.
3. ಪ್ರತಿ ಮಗುವಿನೊಂದಿಗೆ ಮಗುವಿನ ತಾಯಿ/ತಂದೆ/ಪೋಷಕರು ಒಬ್ಬರಿಗೆ ಮಾತ್ರ ನಿಗದಿತ 2ನೇ ದರ್ಜೆಯ ರೈಲು/ಬಸ್ ದರದಂತೆ ಪ್ರಯಾಣ ಭತ್ಯೆ ನೀಡಲು ಹಾಗೂ ದಿನಭತ್ಯೆ ರೂ. 100/– ರಂತೆ ಮಗುವು ಆಸ್ಪತ್ರೆಯಲ್ಲಿ ಒಳರೋಗಿಯಾಗಿರುವವರೆಗೆ ನೀಡುವುದು.
4. ಆಸ್ಪತ್ರೆ ಇರುವ ಜಿಲ್ಲೆಯ ಕೇಂದ್ರ ಸ್ಥಾನದಲ್ಲಿರುವ ಉಪ ನಿರ್ದೇಶಕರು ಒಟ್ಟು ವೆಚ್ಚದ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಪ್ರಧಾನ ಕಛೇರಿಯಿಂದ ಇವರಿಗೆ ತ್ರೈಮಾಸಿಕಕೊಮ್ಮೆ ರೂ. 25 ಲಕ್ಷಗಳನ್ನು ಬಿಡುಗಡೆ ಮಾಡಲಾಗುವುದು.
5. ಆಸ್ಪತ್ರೆಯ ವೈದ್ಯರು ಮಗುವಿನ ಆಸ್ಪತ್ರೆಯ ವೆಚ್ಚ ಭರಿಸಿ, ಭರಿಸಿದ ವೆಚ್ಚಕ್ಕೆ ವೋಚರ್‌ನೊಂದಿಗೆ ಉಪ ನಿರ್ದೇಶಕರಿಗೆ ಪ್ರಸ್ತಾವನೆಯನ್ನು ಸಲ್ಲಿಸಬೇಕು. ಸಲ್ಲಿಸಿದ ಪ್ರಸ್ತಾವನೆಯ ಆಧಾರದ ಮೇಲೆ ಉಪ ನಿರ್ದೇಶಕರು ಡಿಸಿ ಬಿಲ್ಲಿನಲ್ಲಿ ಹಣ ಸೆಳೆದು ಆಸ್ಪತ್ರೆಗೆ ಮರುಪಾವತಿ ಮಾಡುವುದು.
6. ಅಂಗನವಾಡಿ ಕೇಂದ್ರದ ಮೇಲ್ವಿಚಾರಕಿಯರು ಸಿಡಿಪಿಓ ಕಛೇರಿಗಳಲ್ಲಿ ಮಗುವಿನ ವಿವರ ಹಾಗೂ ವೆಚ್ಚದ ವಿವರಗಳ ದಾಖಲಾತಿ ನಿರ್ವಹಿಸುವುದು.
7. ಗುರುತಿಸಿದ 5 ಆಸ್ಪತ್ರೆಗಳಲ್ಲಿ ಲಭ್ಯವಿರುವ ಔಷಧಿ ಹೊರತುಪಡಿಸಿ ಉಳಿದ ಔಷಧಿಗಳ ವೆಚ್ಚವನ್ನು ಈ ಯೋಜನೆಯಡಿ ಭರಿಸಬಹುದಾಗಿರುತ್ತದೆ.
8. ಅನುದಾನದ ಖರ್ಚಿಗೆ ಸಂಬಂಧಪಟ್ಟಂತೆ ಅನುದಾನ ಉಪಯುಕ್ತತಾ ಪ್ರಮಾಣ ಪತ್ರವನ್ನು ಆಯಾ ಜಿಲ್ಲೆಯ ಉಪ ನಿರ್ದೇಶಕರುಗಳು ನೀಡುವುದು.

**VII. ಯೋಜನೆಯಡಿ ಆಸ್ಪತ್ರೆಯವರು ಈ ಕೆಳಕಂಡ ಬಾಬ್ತಿಗೆ ವೆಚ್ಚ ಭರಿಸುವುದು :**

1. ಯಾವ ಔಷಧಿಗಳು ಆಸ್ಪತ್ರೆಯಲ್ಲಿ ಉಚಿತವಾಗಿ ಲಭ್ಯವಿಲ್ಲವೋ ಅಂತಹ ಔಷಧಿಗಳು.
2. ಚಿಕಿತ್ಸೆಯ ಪೂರಕ ವೆಚ್ಚಗಳು (consumable) ಉದಾ: ಸಿರೆಂಜ್, ಗ್ಲೂಕೋಸ್, ಆಕ್ಸಿಝಿನ್, ವೆಂಟಿಲೇಟರ್, ಔಷಧಿಗಳು ಇತ್ಯಾದಿ.
3. ಆಯ್ದ 5 ಆಸ್ಪತ್ರೆಗಳಲ್ಲಿ ಯಾವುದಾದರೂ Investigation ಸೌಲಭ್ಯ ಲಭ್ಯವಿಲ್ಲದಿದ್ದಲ್ಲಿ ಬೇರೆ ಸಂಸ್ಥೆ/ಆಸ್ಪತ್ರೆಯಲ್ಲಿ ಮಾಡಿಸಿದ ಪಕ್ಷದಲ್ಲಿ ಅದರ ವೆಚ್ಚವನ್ನು ಗರಿಷ್ಠ ಮಿತಿಯಲ್ಲಿ ಸಂಬಂಧಪಟ್ಟ ಆಸ್ಪತ್ರೆಯವರೇ ಭರಿಸುವುದು.

**VIII. ಅನುದಾನದ ನಿರ್ವಹಣೆ :**

1. ನ್ಯೂನ್ಯಪೋಷಣೆಗೆ ಒಳಗಾಗಿರುವ ಮಗುವಿಗೆ ಸಂಬಂಧಪಟ್ಟ ಸಂಪೂರ್ಣ ಅನುದಾನದ ನಿರ್ವಹಣೆ ಆಯಾ ಜಿಲ್ಲೆಯ ಉಪ ನಿರ್ದೇಶಕರದ್ದಾಗಿರುತ್ತದೆ.
2. ಅನುದಾನದ ಖರ್ಚಿನ ಸಂಬಂಧಪಟ್ಟ ಅನುದಾನ ಉಪಯೋಗತಾ ಪ್ರಮಾಣಪತ್ರವನ್ನು ಸಲ್ಲಿಸುವ ಕ್ರಮ ಉಪ ನಿರ್ದೇಶಕರದ್ದಾಗಿರುತ್ತದೆ.

**IX. ಕಾರ್ಯಕ್ರಮದಲ್ಲಿ ಸಹಕರಿಸುವವರು :**

1. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
2. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
3. ವೈದ್ಯಕೀಯ ಆಸ್ಪತ್ರೆ ಹಾಗೂ ವೈದ್ಯಕೀಯ ಶಿಕ್ಷಣ ಸಂಸ್ಥೆಗಳು

**X. ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವಿವಿಧ ಕರ್ಮಚಾರಿಗಳ ಜವಾಬ್ದಾರಿ :**

1. ಯೋಜನೆಯ ಕುರಿತು ಪ್ರಚಾರ/ಸಮುದಾಯದಲ್ಲಿ ತಿಳುವಳಿಕೆ–ನಿರ್ದೇಶನಾಲಯ/ಉಪ ನಿರ್ದೇಶಕರು/ ನಿರೂಪಣಾಧಿಕಾರಿಗಳು/ ಸಿಡಿಪಿಒ/ ಎಸಿಡಿಪಿಒ/ಮೇಲ್ವಿಚಾರಕಿ/ಅಂಗನವಾಡಿ ಕಾರ್ಯಕರ್ತೆ/ಆಶಾ/ANM/ ವೈದ್ಯಾಧಿಕಾರಿಗಳು.
2. ಮಕ್ಕಳಗುರುತಿಸುವಿಕೆ ಮೇಲ್ವಿಚಾರಕಿ/ಅಂಗನವಾಡಿಕಾರ್ಯಕರ್ತೆ/ಆಶಾ/ANM/PHC/PHU/ಸಾರ್ವಜನಿಕ ಆಸ್ಪತ್ರೆಯ ವೈದ್ಯಾಧಿಕಾರಿಗಳು.
3. ಮಕ್ಕಳನ್ನು ಆಸ್ಪತ್ರೆಗೆ ರೆಫರ್ ಮಾಡುವುದು – ಅಂಗನವಾಡಿ ಕಾರ್ಯಕರ್ತೆ/ ANM/ವೈದ್ಯಾಧಿಕಾರಿಗಳು/ಸಿಡಿಪಿಒ/ಎಲ್‌ಹೆಚ್‌ವಿ.
4. ಮಕ್ಕಳನ್ನು ಆಸ್ಪತ್ರೆಗೆ ದಾಖಲಿಸುವುದು – ಅಂಗನವಾಡಿ ಕಾರ್ಯಕರ್ತೆ/ಸಿಡಿಪಿಒ/ಮೇಲ್ವಿಚಾರಕಿ
5. ಮಕ್ಕಳ ಚಿಕಿತ್ಸೆ – ಆಸ್ಪತ್ರೆಯ ವೈದ್ಯರು
6. ಮಕ್ಕಳ ಅನುಪಾಲನೆ – ಸಿಡಿಪಿಒ/ಎಸಿಡಿಪಿಒ/ಮೇಲ್ವಿಚಾರಕಿ/ಅಂಗನವಾಡಿ ಕಾರ್ಯಕರ್ತೆ/ಆಶಾ/ ANM
7. ಮಕ್ಕಳ ದಾಖಲೆ ನಿರ್ವಹಣೆ – ಅಂಗನವಾಡಿ ಕಾರ್ಯಕರ್ತೆ/ಮೇಲ್ವಿಚಾರಕಿ/ಸಿಡಿಪಿಒ/ಉಪ ನಿರ್ದೇಶಕರು
8. ಮಗು ಆಸ್ಪತ್ರೆಯಲ್ಲಿರುವಾಗ ಭೇಟಿ/ಮೇಲ್ವಿಚಾರಣೆ – ಸಿಡಿಪಿಒ/ನಿರುಪಣಾಧಿಕಾರಿ/ಉಪ ನಿರ್ದೇಶಕರು
9. ಲೆಕ್ಕಪತ್ರ ನಿರ್ವಹಣೆ – ಉಪ ನಿರ್ದೇಶಕರು/ಸಿಡಿಪಿಒ
10. ಬಿಡುಗಡೆ ಹೊಂದಿ ಮನೆಗೆ ಹೊರಡುವಾಗ ಫಾಲೊ ಅಪ್ – ಅಂಗನವಾಡಿ ಕಾರ್ಯಕರ್ತೆ/ಆಶಾ/ಮೇಲ್ವಿಚಾರಕಿ.

**XI. ಇತರೆ :**

1. ಅಂಗನವಾಡಿ ಕಾರ್ಯಕರ್ತೆಯರಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಮಹಿಳೆ ಮತ್ತು ಮಕ್ಕಳ ಆರೋಗ್ಯ ಸುಧಾರಣೆಗೆ ಸಂಬಂಧಪಟ್ಟಂತೆ ಯೋಜನೆಗಳ ಕುರಿತು ವೃತ್ತ ಸಭೆ/ಬ್ಲಾಕ್ ಸಭೆಗಳಲ್ಲಿ ಆರೋಗ್ಯ ಮತ್ತು ಕುಟುಂಬ ಇಲಾಖೆಯ ಅಧಿಕಾರಿಗಳ ತರಬೇತಿ ನೀಡುವುದು. ಅಂತಹ ಕಾರ್ಯಕ್ರಮದಲ್ಲಿಯ ಅನುದಾನ ಸದರಿ ಮಕ್ಕಳ ಚಿಕಿತ್ಸೆಗಾಗಿ ಸೌಲಭ್ಯವಿದ್ದಲ್ಲಿ ಅಳವಡಿಸಿಕೊಳ್ಳುವುದು.
2. ಪ್ರಾರಂಭಿಕ ಹಂತದಲ್ಲಿ ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಿ ಅದರ ಕುರಿತು ನಿರಂತರ ಮೌಲ್ಯಮಾಪನ ಮಾಡಿ ವಿಶ್ಲೇಷಿಸಿ ರಾಜ್ಯ ಸರ್ಕಾರಕ್ಕೆ ಕಳುಹಿಸುವುದು. ರೂ. 5.00 ಕೋಟಿ ಅನುದಾನ ಸಾಕಾಗದೇ ಇರುವ ಸಂದರ್ಭದಲ್ಲಿ ಹೆಚ್ಚಿನ ಅನುದಾನ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವುದು.
3. ಸದರಿ ಯೋಜನೆಯ ಯಶಸ್ವಿ ಅನುಷ್ಠಾನಕ್ಕೆ ಸ್ಥಳೀಯ ಸರ್ಕಾರ (ಗ್ರಾ.ಪಂ./ತಾ.ಪಂ./ಜಿ.ಪಂ.) ಯೂನಿಸೆಫ್ ಸಹಕಾರ ಪಡೆಯಲು ಕ್ರಮ ಜರುಗಿಸುವುದು.
4. ಆಯ್ದ 5 ಆಸ್ಪತ್ರೆಗಳಲ್ಲಿ **ಬಾಲಸಂಜೀವಿನಿ** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಾಯೋಜಿತ ಎಂದು ಫಲಕವನ್ನು ಹಾಕುವುದು.
5. ಆಸ್ಪತ್ರೆಗಳವರು ನಿರ್ದೇಶಕರು/ಕಾರ್ಯದರ್ಶಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರೊಂದಿಗೆ ಯೋಜನೆ ಅನುಷ್ಠಾನ ಕುರಿತಂತೆ ಕರಾರು ಒಪ್ಪಂದ ಮಾಡಿಕೊಳ್ಳುವುದು.
6. ಪ್ರಧಾನ ಕಛೇರಿಯಿಂದ ಸುಮಾರು 10,000 ರೆಫರಲ್ ಕಾರ್ಡ್‌ಗಳನ್ನು ಮುದ್ರಿಸಲು ಹಾಗೂ ಎಲ್ಲಾ 30 ಜಿಲ್ಲೆಗಳಿಗೆ ವಿತರಿಸುವುದು.

ಪಿ.ಆರ್.2763

**ಎಸ್. ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** M/s ¨Bellandur Power Projects Pvt. Ltd. ಇವರಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ವರ್ತೂರು ಕಿ.ಜ.ವಿ/2010/1917 ದಿನಾಂಕ: 18/23.06.2010.
2. ದಿನಾಂಕ 06.08.2010ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Bellandur Power Projects Pvt.Ltd. ಇವರಿಗೆ ಬೆಂಗಳೂರು ಜಿಲ್ಲೆಯ ಬೆಂಗಳೂರು ತಾಲ್ಲೂಕಿನ ವರ್ತೂರು ಗ್ರಾಮದ ಬಳಿ ವರ್ತೂರು ಕೆರೆಯ ಕೋಡಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Bellandur Power Projects Pvt. Ltd. ಇವರಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 268 ಎನ್‌ಸಿಇ 2010, ಬೆಂಗಳೂರು, ದಿನಾಂಕ: 03–11–2010.**

M/s Bellandur Power Projects Pvt. Ltd. ಇವರಿಗೆ ಬೆಂಗಳೂರು ಜಿಲ್ಲೆಯ ಬೆಂಗಳೂರು ತಾಲ್ಲೂಕಿನ ವರ್ತೂರು ಗ್ರಾಮದ ಬಳಿ ವರ್ತೂರು ಕೆರೆಯ ಕೋಡಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 12º56`43'' Longitude : 77º44'53'' Power House-Latitude: 12º56`45'' Longitude : 77º44'58'') ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ)ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ)ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

13. ಈ ಯೋಜನೆಗೆ ಸಂಬಂಧಿಸಿದಂತೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಅಭಿವೃದ್ಧಿದಾರರು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತೀರುವಳಿ ಪಡೆಯಬೇಕು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅನುಮೋದನೆಯನ್ನು ಪಡೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2768

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** M/s ¨Bellandur Power Projects Pvt. Ltd. ಇವರಿಗೆ ಬೆಲ್ಲಂದೂರು ಕೆರೆಯ ಕೋಡಿಗೆ ಅಡ್ಡಲಾಗಿ ಬೆಲ್ಲಂದೂರು–II ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಬೆಲ್ಲಂದೂರು–II ಕಿ.ಜ.ವಿ/2010/1919 ದಿನಾಂಕ: 18/23.06.2010.

2. ದಿನಾಂಕ 06.08.2010ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Bellandur Power Projects Pvt.Ltd. ಇವರಿಗೆ ಬೆಂಗಳೂರು ಜಿಲ್ಲೆಯ ಬೆಂಗಳೂರು ತಾಲ್ಲೂಕಿನ ಯಮಲೂರು ಗ್ರಾಮದ ಬಳಿ ಬೆಲ್ಲಂದೂರು ಕೆರೆಯ ಕೋಡಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Bellandur Power Projects Pvt. Ltd. ಇವರಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 269 ಎನ್‌ಸಿಇ 2010, ಬೆಂಗಳೂರು, ದಿನಾಂಕ: 03–11–2010.**

M/s Bellandur Power Projects Pvt. Ltd. ಇವರಿಗೆ ಬೆಂಗಳೂರು ಜಿಲ್ಲೆಯ ಬೆಂಗಳೂರು ತಾಲ್ಲೂಕಿನ ಯಮಲೂರು ಗ್ರಾಮದ ಬಳಿ ಬೆಲ್ಲಂದೂರು ಕೆರೆಯ ಕೋಡಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಬೆಲ್ಲಂದೂರು –II ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 12º56`36'' Longitude : 77º40'50'' Power House-Latitude: 12º56`35'' Longitude : 77º40'55'') ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ)ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ)ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ)ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
13. ಈ ಯೋಜನೆಗೆ ಸಂಬಂಧಿಸಿದಂತೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಅಭಿವೃದ್ಧಿದಾರರು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತೀರುವಳಿ ಪಡೆಯಬೇಕು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅನುಮೋದನೆಯನ್ನು ಪಡೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 2769

## ಇಂಧನ ಸಚಿವಾಲಯ

**ವಿಷಯ :** M/s ¨Bellandur Power Projects Pvt. Ltd. ಇವರಿಗೆ 1.5 ಮೆಗಾವ್ಯಾಟ್ ಸಾಮರ್ಥ್ಯದ ಬೆಲ್ಲಂದೂರು–I ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಬೆಲ್ಲಂದೂರು–I ಕಿ.ಜ.ವಿ/2010/1914 ದಿನಾಂಕ: 18/23.06.2010.
2. ದಿನಾಂಕ 06.08.2010ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Bellandur Power Projects Pvt.Ltd. ಇವರಿಗೆ ಬೆಂಗಳೂರು ಜಿಲ್ಲೆಯ ಬೆಂಗಳೂರು ತಾಲ್ಲೂಕಿನ ಬೆಲ್ಲಂದೂರು ಗ್ರಾಮದ ಬಳಿ ಬೆಲ್ಲಂದೂರು ಕೆರೆಯ ಕೋಡಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಬೆಲ್ಲಂದೂರು-I ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Bellandur Power Projects Pvt. Ltd. ಇವರಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 270 ಎನ್‌ಸಿಇ 2010, ಬೆಂಗಳೂರು, ದಿನಾಂಕ: 03–11–2010.**

M/s Bellandur Power Projects Pvt. Ltd. ಇವರಿಗೆ ಬೆಂಗಳೂರು ಜಿಲ್ಲೆಯ ಬೆಂಗಳೂರು ತಾಲ್ಲೂಕಿನ ಬೆಲ್ಲಂದೂರು ಗ್ರಾಮದ ಬಳಿ ಬೆಲ್ಲಂದೂರು ಕೆರೆಯ ಕೋಡಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಬೆಲ್ಲಂದೂರು –I ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: 12º55`50'' Longitude : 77º40'41'' Power House-Latitude: 12º55`49'' Longitude : 77º40'45'') ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ)ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ)ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
13. ಈ ಯೋಜನೆಗೆ ಸಂಬಂಧಿಸಿದಂತೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಅಭಿವೃದ್ಧಿದಾರರು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತೀರುವಳಿ ಪಡೆಯಬೇಕು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅನುಮೋದನೆಯನ್ನು ಪಡೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 2770

## ಇಂಧನ ಸಚಿವಾಲಯ

**ವಿಷಯ :** ಮೆ|| ಪ್ರಸನ್ನ ಪವರ್ ಲಿಮಿಟೆಡ್ ಇವರ ಈಗಾಗಲೇ ಅನುಷ್ಠಾನಗೊಂಡಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯೊಂದಿಗೆ ಹೆಚ್ಚುವರಿಯಾಗಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಮತ್ತೊಂದು ಘಟಕವನ್ನು ಅಳವಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಡಿಇ 42 ಎನ್‌ಸಿಇ 1998 ದಿನಾಂಕ: 11.11.1998.
2. ಸರ್ಕಾರದ ಆದೇಶ ಸಂಖ್ಯೆ: ಡಿಇ 105 ಎನ್‌ಸಿಇ 2002 ದಿನಾಂಕ: 28.05.2002.
3. ಸರ್ಕಾರದ ಆದೇಶ ಸಂಖ್ಯೆ: ಇಎನ್ 266 ಎನ್‌ಸಿಇ 2003 ದಿನಾಂಕ: 12.02.2004
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಅನಿಯೂರು– ಕಿ.ಜ.ವಿ/2010/2138 ದಿನಾಂಕ: 14.07.2010/20.07.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆII ಪ್ರಸನ್ನ ಪವರ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ಮತ್ತು (3) ರ ಆದೇಶಗಳಲ್ಲಿ ಮೆ|| ಪ್ರಸನ್ನ ಪವರ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 6.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ|| ಪ್ರಸನ್ನ ಪವರ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಮೇಲ್ಕಂಡ ಕಿರು ಜಲ ವಿದ್ಯುತ್ ಯೋಜನೆಯು ದಿನಾಂಕ: 13.08.2009ರಂದು ಅನುಷ್ಠಾನಗೊಂಡಿದ್ದು ಈಗಾಗಲೇ ಅನುಷ್ಠಾನಗೊಂಡಿರುವ ಯೋಜನೆಯಿಂದ ಲಭ್ಯವಿರುವ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಹೆಚ್ಚುವರಿಯಾಗಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಮತ್ತೊಂದು ಘಟಕವನ್ನು ಅಳವಡಿಸಲು ಸದರಿ ಕಂಪನಿಯವರು ಯೋಜಿಸಿದ್ದು, ರಾಜ್ಯದ ವಿದ್ಯುತ್ ಜಾಲಕ್ಕೆ ಹೆಚ್ಚುವರಿ ವಿದ್ಯುತ್ ಲಭ್ಯವಾಗಲಿರುವುದರಿಂದ ಹೆಚ್ಚುವರಿಯಾಗಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಮತ್ತೊಂದು ಘಟಕವನ್ನು ಅಳವಡಿಸಲು ಅನುಮತಿ ನೀಡಬೇಕೆಂದು ಕ್ರೆಡಲ್ ನ ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 319 ಎನ್‌ಸಿಇ 2010, ಬೆಂಗಳೂರು, ದಿನಾಂಕ: 03–11–2010.**

ಮೆ॥ ಪ್ರಸನ್ನ ಪವರ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ, ಅಣಿಯೂರು ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯೊಂದಿಗೆ ಹೆಚ್ಚುವರಿಯಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಮತ್ತೊಂದು ಘಟಕವನ್ನು ಅಳವಡಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಡಿಇ 42 ಎನ್‌ಸಿಇ 1998 ದಿನಾಂಕ: 11.11.1998ರ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 2771

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಶಿವಸಾಗರ ಶುಗರ್ ಅಂಡ್ ಅಗ್ರೋ ಪ್ರಾಡಕ್ಟ್ಸ್ ಲಿಮಿಟೆಡ್ ಇವರಿಗೆ 18 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/04/ಎಸ್‌ಎಸ್‌ಎಸ್‌ಪಿಎಲ್/ 10/2069 ದಿನಾಂಕ: 07/08.07.2010 ಮತ್ತು ಕೆಆರ್‌ಇಡಿ/04/ ಎಸ್‌ಎಸ್‌ಎಸ್&ಎಪಿಎಲ್/10/2534 ದಿನಾಂಕ: 03/04.09.2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ಶಿವಸಾಗರ್ ಶುಗರ್ ಅಂಡ್ ಅಗ್ರೋ ಪ್ರಾಡಕ್ಟ್ಸ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಉಡಮುಡಿ ಗ್ರಾಮದಲ್ಲಿ 18 MW (Gross) ಮತ್ತು 10.37 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 315 ಎನ್‌ಸಿಇ 2010, ಬೆಂಗಳೂರು, ದಿನಾಂಕ: 28–10–2010.**

ಮೆ॥ ಶ್ರೀ ಶಿವಸಾಗರ್ ಶುಗರ್ ಅಂಡ್ ಅಗ್ರೋ ಪ್ರಾಡಕ್ಟ್ಸ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಉಡಮುಡಿ ಗ್ರಾಮದಲ್ಲಿ 18 MW (Gross) ಮತ್ತು 10.37 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗೊಳಪಟ್ಟು ಸರ್ಕಾರದ ನಿರಾಕ್ಷೇಪಣೆಯನ್ನು ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka power Transmission Corporation Limited in case of selling power to third party and power purchase agreement in case of selling power to Karnataka power Transmission Corporation Limited.
3. The company shall obtain necessary statutory clearance Wherever required from the respective Departments / Organizations such as forest Department, Revenue Department, & Karnataka State pollution Control Board, etc. for both the Sugar Mill and the Power plant.
4. The Detailed Project Report (D.P.R.) for the Power Plant shall be got approved by Karnataka Renewable Energy Development Limited , before the commencement of the power plant.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 2772

## ಇಂಧನ ಸಚಿವಾಲಯ

**ವಿಷಯ :** ಮೆ॥ ಸತೀಶ್ ಶುಗರ್ಸ್ ಲಿಮಿಟೆಡ್ ಇವರಿಗೆ 16 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ/04/ಎಸ್‌ಎಸ್‌ಎಲ್/10/2517 ದಿನಾಂಕ: 18.08.2010./03.09.2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕರ ನಿರ್ದೇಶಕರು ಮೆ॥ ಸತೀಶ್ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುನ್ನಾಳ್ ಪಿಜಿ ಗ್ರಾಮದಲ್ಲಿ 16 MW(Gross) ಮತ್ತು 8.00 MW(exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 405 ಎನ್‌ಸಿಇ 2010, ಬೆಂಗಳೂರು, ದಿನಾಂಕ: 28–10–2010.**

ಮೆII ಸತೀಶ್ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುನ್ಶ್ಯಾಳ್ ಪಿಜಿ ಗ್ರಾಮದಲ್ಲಿ 16 MW (Gross) ಮತ್ತು 8.00 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗೊಳಪಟ್ಟು ಸರ್ಕಾರದ ನಿರಾಕ್ಷೇಪಣೆಯನ್ನು ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka power Transmission Corporation Limited in case of selling power to third party and power purchase agreement in case of selling power to Karnataka power Transmission Corporation Limited.
3. The company shall obtain necessary statutory clearance Wherever required from the respective Departments / Organizations such as forest Department, Revenue Department, & Karnataka State pollution Contol Board, etc. for both the Sugar Mill and the Power plant.
4. The Detailed Project Report (D.P.R.) for the Power Plant shall be got approved by Karnataka Renewable Energy Development Limited , before the commencement of the power plant.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2773

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

## ತಿದ್ದುಪಡಿ

ಸಂಖ್ಯೆ: ಇಎನ್ 329 ಎನ್‌ಸಿಇ 2007 ಬೆಂಗಳೂರು, ದಿನಾಂಕ: 02.11.2010.

ಸರ್ಕಾರಿ ಆದೇಶ ಸಂಖ್ಯೆ: ಇಎನ್ 329 ಎನ್‌ಸಿಇ 2007 ದಿನಾಂಕ: 22.02.2010ರಲ್ಲಿ ನಮೂದಿಸಲಾಗಿರುವ **"ಚನ್ನರಾಯಪಟ್ಟಣ ತಾಲ್ಲೂಕು"** ಎಂಬುದನ್ನು **"ಹೊಳೆನರಸೀಪುರ ತಾಲ್ಲೂಕು"** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್. ಬಿ. ಕೃಷ್ಣಪ್ಪನವರ್**

ಪಿ.ಆರ್. 2774

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ENERGY SECRETARIAT

**Sub:** Enhancement of wind power capacity from 4.5 MW to 12.6 MW in favour of M/s Vestas Wind Technology India Private Limited-reg.

Read: 1. Government Order No. EN 210 NCE 2005 dated: 20-08-2005.
2. Government Order No. EN 463 NCE 2006 dated: 22-12-2006.
3. Letter No. KRED/08/VWTIPL/2010/2649 dated: 07/20-09-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 99.75 MW capacity Wind Power Project at Bagalkot, Raichur, Bidar, Bijapur and Gulbarga Districts to M/s NEG Micon (India) Pvt. Ltd (The part capacity of 4.5 MW wind power project at Masbinal, Ingaleshwartanda, Bijapur District)

In the Government Order read at (2) above, the company name was changed from M/s NEG Micon India (P) Ltd. to M/s Vestas Wind Technology India Private Limited.

The Managing Director, Karnataka Renewable Energy Development Limited, Bangalore vide his letter read at (3) above has recommended to enhance the wind power capacity to 12.6 MW from the part capacity of 4.5 MW of the main capacity of 99.75 MW at Masbinal, Ingaleshwaratanda villages, Bijapur District in favour of M/s Vestas Wind Technolgy India Pvt. Ltd.

The proposal has been examined in detail and issued following Orders:-

| | | | | | |
|---|---|---|---|---|---|
| 25. | ರಾಮನಗರ | 40,000 | 4 | 50000 | 90000 |
| 26. | ಶಿವಮೊಗ್ಗ | 40,000 | 7 | 87500 | 127500 |
| 27 | ತುಮಕೂರು | 40,000 | 10 | 125000 | 165000 |
| 28. | ಉಡುಪಿ | 40,000 | 3 | 37500 | 77500 |
| 29. | ಉತ್ತರ ಕನ್ನಡ | 40,000 | 11 | 137500 | 177500 |
| 30. | ಯಾದಗಿರಿ | 40,000 | 3 | 37500 | 77500 |
| ಒಟ್ಟು ಮೊತ್ತ | | ರೂ. 12,00,000 | 176 | ರೂ. 22,00,000 | ರೂ.34,00,000 |

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ
ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ, ಬೆಂಗಳೂರು

## ಅನುಬಂಧ-3

**2010-11ನೇ ಸಾಲಿನ ಪಂಚಾಯತ್ ಯುವ ಕ್ರೀಡಾ ಔರ್ ಖೇಲ್ ಅಭಿಯಾನ್ ಯೋಜನೆ ಅಡಿ ರಾಜ್ಯ ಮಟ್ಟದ ಕ್ರೀಡೆಗಳನ್ನು ಸಂಘಟಿಸಲು ಬಿಡುಗಡೆಗೊಳಿಸುವ ಶೇಕಡ 25ರ ಅನುದಾನದ ವಿವರ**

| ಕ್ರ.ಸಂ. | ಗುಂಪು | ಕ್ರೀಡೆಗಳ ಹೆಸರು | ಸ್ಪರ್ಧೆಗಳ ಸಂಘಟಿಸುವ ಜಿಲ್ಲೆ | ಮೊತ್ತ ರೂ.ಗಳಲ್ಲಿ |
|---|---|---|---|---|
| 1. | I | ಅಥ್ಲೆಟಿಕ್ಸ್, ಬ್ಯಾಸ್ಕೆಟ್‌ಬಾಲ್, ಕುಸ್ತಿ, ಭಾರ ಎತ್ತುವ ಸ್ಪರ್ಧೆ | ಬೆಳಗಾಂ | 50,000 |
| 2. | II | ಫುಟ್‌ಬಾಲ್, ಜಿಮ್ನಾಸ್ಟಿಕ್ಸ್, ಟೇಬಲ್ ಟೆನ್ನಿಸ್ | ಚಾಮರಾಜನಗರ | 50,000 |
| 3. | III | ವಾಲಿಬಾಲ್, ಕಬ್ಬಡಿ, ಖೋ-ಖೋ-, ಆರ್ಚರಿ | ಬೆಂಗಳೂರು ಗ್ರಾಮಾಂತರ | 50,000 |
| 4. | IV | ಹಾಕಿ, ಹ್ಯಾಂಡ್‌ಬಾಲ್, ಜುಡೋ, ಸೈಕ್ಲಿಂಗ್, ಸ್ವಿಮ್ಮಿಂಗ್ | ಮೈಸೂರು | 50,000 |

ಪಿ.ಆರ್. 2790

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ
ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ, ಬೆಂಗಳೂರು

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಕೆ. ನರಸಿಂಹ, ವಜಾಗೊಂಡಿರುವ ಶಿರಸ್ತೇದಾರ್, ಸಿಂಧನೂರು ರವರು ಸಲ್ಲಿಸಿರುವ ಮೇಲ್ಮನವಿ ಕುರಿತು.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರ ಆದೇಶ ಸಂಖ್ಯೆ:ಕಂದಾಯ/ಶಿಸ್ತು/101/2003-04, ದಿನಾಂಕ:17-01-2004.
2. ವಿಚಾರಣಾಧಿಕಾರಿಗಳು ಹಾಗೂ ಸಹಾಯಕ ಆಯುಕ್ತರು, ಲಿಂಗಸಗೂರು ಇವರ ವರದಿ ದಿನಾಂಕ:0-09-2004.
3. ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಕಂ/ಪ್ರಾಆಗು/ಶಿಸ್ತು/02/2006-07, ದಿನಾಂಕ:25-09-2007
4. ಶ್ರೀ ನರಸಿಂಹ, ವಜಾಗೊಂಡಿರುವ ಶಿರಸ್ತೇದಾರ್ ಇವರ ಮೇಲ್ಮನವಿ ದಿನಾಂಕ:23-10-2007.
5. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ:ಪಿಎಸ್‌ಸಿ/95/ಸಿಎನ್‌ಎಸ್/2009, ದಿನಾಂಕ:09-07-2010.

**ಪ್ರಸ್ತಾವನೆ :**

ಗುಲಬರ್ಗಾ ಕಂದಾಯ ವಿಭಾಗದ ಶಿರಸ್ತೇದಾರ್/ಉಪ ತಹಶೀಲ್ದಾರ್ ವೃಂದದ ನೌಕರರಾದ ಶ್ರೀ ಕೆ.ನರಸಿಂಹ ಇವರು ಹಿಂದೆ ಬಳ್ಳಾರಿ ತಾಲ್ಲೂಕು ಮತ್ತು ಜಿಲ್ಲೆಯ ರೂಪನಗೂಡಿ ನಾಡಕಛೇರಿಯಲ್ಲಿ ಉಪತಹಶೀಲ್ದಾರ್‌ರಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ ಕ್ರಮ ಜರುಗಿಸಿ ಅಪರಾಧ ಹಾಗೂ ಕರ್ತವ್ಯ ಲೋಪಗಳನ್ನು ಎಸಗಿದ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)

ನಿಯಮಗಳು 1957ರನ್ವಯ ಹಿಂದಿನ ಗುಲ್ಬರ್ಗ ವಿಭಾಗಾಧಿಕಾರಿಗಳು ದಿನಾಂಕ 04–09–2002 ರಂದು ಶ್ರೀ ಕೆ.ನರಸಿಂಹ ಇವರ ಮೇಲೆ 13 ಗುರುತರ ಆರೋಪಗಳನ್ನು ಹೊರಿಸಿ ಅನುಬಂಧ–1 ರಿಂದ 4 ರವರೆಗೆ ದೋಷಾರೋಪಣೆ ಪಟ್ಟಿ ಜಾರಿ ಮಾಡಿ, ಆರೋಪಿತರ ವಿರುದ್ಧದ ಆರೋಪಗಳ ಸತ್ಯಾಸತ್ಯತೆ ಬಗ್ಗೆ ವಿಚಾರಣೆ ನಡೆಸಲು ಮೇಲೆ ಕ್ರಮ ಸಂಖ್ಯೆ 1ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗ ಜಿಲ್ಲಾಧಿಕಾರಿಗಳು ತಮಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(2)ರನ್ವಯ ಸಹಾಯಕ ಆಯುಕ್ತರು, ಲಿಂಗಸಗೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮತ್ತು ಅದೇ ನಿಯಮಗಳ ನಿಯಮ 11(5)(ಸಿ) ರನ್ವಯ ಲಿಂಗಸಗೂರು ಸಹಾಯಕ ಆಯುಕ್ತರ ಕಛೇರಿಯ ಶಿರಸ್ತೇದಾರರನ್ನು "ಮಂಡನಾಧಿಕಾರಿ" ಯನ್ನಾಗಿ ನೇಮಕಗೊಳಿಸಿರುತ್ತಾರೆ. ಶ್ರೀ ಕೆ.ನರಸಿಂಹ ಇವರ ಮೇಲಿನ 13 ಆರೋಪಗಳು ಈ ಕೆಳಕಂಡಂತಿರುತ್ತವೆ.

**ಆರೋಪ 1:** ಬಳ್ಳಾರಿ ತಾಲ್ಲೂಕು, ಶಿಡಿಗಿನಮೊಳ ಗ್ರಾಮದ ಸ.ನಂ.602 ಹೆಚ್ ವಿಸ್ತೀರ್ಣ 2–49 ಎಕರೆ ಭೂಮಿ ಮ್ಯುಟೇಶನ್ ಮಾಡಲು ಪಿ.ಟಿ.ಸಿ.ಎಲ್. ಕಾಯ್ದೆ 1978 ಉಲ್ಲಂಘಿಸಿ ಆದೇಶಿಸಿರುವುದು.

**ಆರೋಪ 2:** ಬಳ್ಳಾರಿ ತಾಲ್ಲೂಕು, ಶಿಡಿಗಿನಮೊಳ ಗ್ರಾಮದ ಸ.ನ.616(ಎ)ನ ವಿಸ್ತೀರ್ಣ 1–50 ಎಕರೆ ರಸ್ತೆ ಪರಂಪೋಕ ಇದ್ದು, ಕಾಯ್ದೆ ಬಾಹಿರವಾಗಿ ಶ್ರೀ ಹೊನ್ನೂರವಲಿ ಎಂಬುವವರ ಹೆಸರು ಪಹಣಿ ಕಲಂ 12(2)ರಲ್ಲಿ ನೋಂದಾಯಿಸಲು ಆದೇಶಿಸಿರುವುದು.

**ಆರೋಪ 3:** ಬಳ್ಳಾರಿ ತಾಲ್ಲೂಕು, ಪಿಡಿಹಳ್ಳಿ ಗ್ರಾಮದ ಸ.ನಂ. 152ಬಿ ವಿಸ್ತೀರ್ಣ 0–80 ಎಕರೆ ಡಿಸ್ಟ್ರಿಕ್ಟ್ ಬೋರ್ಡ್ ಲ್ಯಾಂಡರ್ಸ್ ಜಮೀನಿನಲ್ಲಿ ಕಾಯ್ದೆ ಬಾಹಿರವಾಗಿ ವಾಲ್ಮೀಕಿ ಗೋಪಾಲ ಮತ್ತು ಬೈರಪ್ಪ ಇವರಿಗೆ ಹಕ್ಕು ಬದಲಾವಣೆಗೆ ಆದೇಶಿಸಿರುವುದು.

**ಆರೋಪ 4:** ಬಳ್ಳಾರಿ ತಾಲ್ಲೂಕು, ಚಂಡೂರು ಗ್ರಾಮದ ಸ.ನ.22(ಎ) ವಿಸ್ತೀರ್ಣ 2–00 ಎಕರೆ ಜಮೀನಿಗೆ ಸಂಬಂಧಿಸಿದಂತೆ ಸ್ವೀಕರಿಸಿದ "ಜೆ" ಫಾರ್ಮನ್ನು ಸ್ಟ್ಯಾಂಪ್ ಡ್ಯೂಟಿ ಕಡಿಮೆ ಕಟ್ಟಿದ್ದಾರೆಂಬ ಕಾರಣ ನೀಡಿ ಅಧಿಕಾರ ದುರುಪಯೋಗಪಡಿಸಿಕೊಂಡು "ಜೆ" ಫಾರ್ಮ ಪ್ರಕಾರ ಹಕ್ಕು ಬದಲಾವಣೆ ತಿರಸ್ಕರಿಸಿರುವುದು.

**ಆರೋಪ 5:** ಬಳ್ಳಾರಿ ತಾಲ್ಲೂಕಿನ ಕುಂಟಿನಹಾಳ ಗ್ರಾಮದ ಸ.ನಂ.265 ವಿಸ್ತೀರ್ಣ 0–16 ಎಕರೆ ವಿ.ಎಸ್. ಇನಾಂ ಭೂಮಿ ಇದ್ದುದನ್ನು ಇನಾಂ ರದ್ದತಿಗೊಳಿಸದೇ ಕಾಯ್ದೆಬಾಹಿರವಾಗಿ ಹಕ್ಕು ಬದಲಾವಣೆಗೆ ಆದೇಶಿಸಿರುವುದು.

**ಆರೋಪ 6:** ಬಳ್ಳಾರಿ ತಾಲ್ಲೂಕಿನ ಅಸುಂಡಿ ಗ್ರಾಮದ ಸ.ನಂ.231, 232, ವಿಸ್ತೀರ್ಣ 1–11 ಎಕರೆ ಜಮೀನಿಗೆ ಸಂಬಂಧಿಸಿದಂತೆ ಸ್ವೀಕರಿಸಿದ "ಜೆ" ಫಾರ್ಮನ್ನು ದಿನಾಂಕ 25–08–1996 ರಂದು ತಿರಸ್ಕರಿಸಿ ಮತ್ತು ದಿನಾಂಕ 30–03–1997ರಂದು ಮ್ಯುಟೇಷನ್ ಮಂಜೂರು ಆದೇಶ ನೀಡುವಾಗ ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 80ರಡಿ ಸಹಾಯಕ ಆಯುಕ್ತರಿಗಿದ್ದ ಅಧಿಕಾರ ವ್ಯಾಪ್ತಿ ಮೀರಿ ಸದರಿ ಕಾಯ್ದೆ ಉಲ್ಲಂಘಿಸಿರುವುದು.

**ಆರೋಪ 7:** ಬಳ್ಳಾರಿ ತಾಲ್ಲೂಕು, ಅಸುಂಡಿ ಗ್ರಾಮದ ಸ.ನಂ.229 ವಿಸ್ತೀರ್ಣ 2–16 ಎಕರೆ ಜಮೀನಿಗೆ ಸಂಬಂಧಿಸಿದಂತೆ ಮೊದಲು ವರ್ಗಾವಣೆ ಅರ್ಜಿ ತಿರಸ್ಕರಿಸಿ ನಂತರ ದಿನಾಂಕ 30–03–1999ರಂದು ಆದೇಶ ನೀಡಿ ಮಂಜೂರಿ ಆದೇಶ ನೀಡಿ ಮಂಜೂರಿ ಮಾಡಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು.

**ಆರೋಪ 8:** ಬಳ್ಳಾರಿ ತಾಲ್ಲೂಕು, ಶಿಡಗಿನಮೊಳ ಗ್ರಾಮದ ಸ.ನಂ.319 ವಿಸ್ತೀರ್ಣ 4–00 ಎಕರೆ ಜಮೀನಿಗೆ ಸಂಬಂಧಿಸಿದಂತೆ ಭೂನ್ಯಾಯ ಮಂಡಳಿ ಮುಂದು ನಮೂನೆ–11ರಲ್ಲಿ ಸಲ್ಲಿಸಿದ ಘೋಷಣೆ ಪತ್ರ ವಿಲೇ ಆಗುವವರೆಗೂ ಸ್ಥಗಿತಗೊಳಿಸಬೇಕಾದ ಹಕ್ಕುಬದಲಾವಣೆಯನ್ನು ಮಂಜೂರಿ ಮಾಡಿ ಕರ್ತವ್ಯಲೋಪ ಎಸಗಿರುವುದು.

**ಆರೋಪ 9:** ಬಳ್ಳಾರಿ ತಾಲ್ಲೂಕು, ಚೆಳ್ಳಗುರ್ಕಿ ಗ್ರಾಮದ ಸ. ನಂ. 41ಡಿ ವಿಸ್ತೀರ್ಣ 16–80 ಎಕರೆ ಜಮೀನನ್ನು ದಿನಾಂಕ 25–03–1999ರ ನಡವಳಿ ಪ್ರಕಾರ ಟಿ. ಮಲ್ಲನಗೌಡ ಇವರಿಗೆ ಹಕ್ಕುಬದಲಾವಣೆ ಪತ್ರ ಪರಿಶೀಲಿಸದೇ ಮಂಜೂರು ಮಾಡಿದ್ದು, ಇದೊಂದು ಕಾನೂನು ಬಾಹಿರ ಪ್ರಕರಣವಿದ್ದು, ಭೂಸುಧಾರಣೆ ಕಾಯ್ದೆ 1961ರ ಕಲಂ 80 ರನ್ವಯ ಸಹಾಯಕ ಆಯುಕ್ತರಿಗಿದ್ದ ಅಧಿಕಾರವನ್ನು ಉಲ್ಲಂಘಿಸಿರುತ್ತೀರೆಂದು ಆಪಾದಿಸಲಾಗಿದೆ.

**ಆರೋಪ 10:** ಬಳ್ಳಾರಿ ತಾಲ್ಲೂಕಿನ ಚೆಳ್ಳಗುರ್ಕಿ ಗ್ರಾಮದ ಸ. ನಂ. 10 ಬಿ, 54 ಬಿ, 65, 66, 81ಎ, 84ಎ, 85, 86ಎ, 88ಬಿ/2, 89ಬಿ/2,89ರ ವಿಸ್ತೀರ್ಣ 86–79 ಎಕರೆ ಜಮೀನು ಶ್ರೀ ಮೋಕಾ ದೊಡ್ಡರುದ್ರಣ್ಣ ತಂದೆ ವೀರಭದ್ರಪ್ಪ ಚೆಳ್ಳಗುರ್ಕಿ, ಇವರ ಪತ್ನಿಯರ ಹೆಸರಿನಲ್ಲಿರುವುದರಿಂದ ಸದರಿಯವರು ಏಕೈಕ ಕುಟುಂಬದವರೆಂದು ಪರಿಗಣಿಸಿ ಹಿಡುವಳಿಯ ಘೋಷಣಾ ಅರ್ಜಿಯನ್ನು ಭೂ ನ್ಯಾಯ ಮಂಡಳಿಗೆ ಸಲ್ಲಿಸಲಾರದಕ್ಕೆಂದು ಮೇಲಾಧಿಕಾರಿಗಳಿಗೆ ವರದಿಯನ್ನು ಸಲ್ಲಿಸಬಾರದೇಕೆಂಬ ಅಂಶಕ್ಕೆ ವಿವರಣೆ ಕೇಳಿ ದಿ: 2–12–98 ಮತ್ತು ದಿ: 28–01–1999 ನೋಟೀಸು ನೀಡಿದ್ದಕ್ಕೆ ವಿವರಣೆ ಒಪ್ಪಿಕೊಂಡು ಪರಿಶೀಲನೆಯನ್ನು ರದ್ದುಪಡಿಸಿ ಸಹಾಯಕ ಆಯುಕ್ತರು, ಬಳ್ಳಾರಿ ಇವರ ಅಧಿಕಾರ ಚಲಾಯಿಸಿ ಅಧಿಕಾರ ದುರುಪಯೋಗಿಸಲಾಗಿದೆ.

**ಆರೋಪ 11:** ಶ್ರೀ ರಾಮಚಂದ್ರರೆಡ್ಡಿ, ತಂದೆ ದಿವಂಗತ ವೆಂಕನಗೌಡ ಜೋಳದರಾಶಿ ಗ್ರಾಮ ಇವರ ಕುಟುಂಬದ ಎಲ್ಲಾ ಸದಸ್ಯರು ಭಾಗ ಮಾಡಿಕೊಂಡ ದಸ್ತಾವೇಜು ಸಂಖ್ಯೆ : 5672/91, ದಿನಾಂಕ 05–02–2001ನ್ನು ಭೂನ್ಯಾಯ ಮಂಡಳಿ ಬಳ್ಳಾರಿಗೆ ದಾಖಲೆಗಳನ್ನು ನೀಡಲು ಕಂದಾಯ ನಿರೀಕ್ಷಕರು, ರೂಪನಗುಡಿ ಇವರು ಆದೇಶ ಮಾಡಿದ್ದರೂ ಈ ಬಗ್ಗೆ ಉಪತಹಶೀಲ್ದಾರರೇ ನಿರ್ಣಯ ತೆಗೆದುಕೊಂಡು ಆದೇಶ ಹೊರಡಿಸಿ, ಭೂಸುಧಾರಣೆ ಕಾಯ್ದೆ 1961ರ ಕಲಂ 82ರ ಉಲ್ಲಂಘನೆ ಮಾಡಿರುವುದು ಮತ್ತು ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು.

**ಆರೋಪ 12:** ಶ್ರೀಮತಿ ಪಾರ್ವತಮ್ಮ ಗಂಡ ಕರಣಂ ವೀರಭದ್ರಗೌಡ ಇವರ ಪುತ್ರಿಯರಾದ ಶ್ರೀಮತಿ ಲಕ್ಷ್ಮಿದೇವಮ್ಮ, ಗಂಡ ಭೀಮನಗೌಡ ಹಾಗೂ ಶ್ರೀಮತಿ ಮಹಾದೇವಮ್ಮ ಗಂಡ ಶಂಕರಗೌಡ, ಇವರ ಹೆಸರಿನಲ್ಲಿ ಸ. ನಂ. 220ಎ/1 ವಿಸ್ತೀರ್ಣ 6–97 ಎಕರೆ ಜಮೀನನ್ನು ದಿನಾಂಕ 21–09–2001 ರಂದು ಆದೇಶ ನೀಡಿ ವರ್ಗಾವಣೆ ಮಾಡಿದ್ದು, ಸದರಿ ಭೂಮಿ ಆಶ್ರಯ ಯೋಜನೆ ಅಡಿ ಭೂಸ್ವಾಧೀನವಾಗಿದ್ದ ಬಗ್ಗೆ ತಿಳುವಳಿಕೆ ಇದ್ದೂ, ಹಕ್ಕು ಬಿಡುಗಡೆ ಪತ್ರದಂತೆ ಕ್ರಮ ವಹಿಸಿ ಕರ್ತವ್ಯಲೋಪವೆಸಗಿರುವುದು.

**ಆರೋಪ 13:** ಬಳ್ಳಾರಿ ಸಹಾಯಕ ಆಯುಕ್ತರು ಹೊರಡಿಸಿದ ಆದೇಶ ಸಂಖ್ಯೆ : ಕಂ/ಅಪೀಲು/18/2001–02, ದಿನಾಂಕ 23–03–2002 ರಲ್ಲಿ ಉಪತಹಶೀಲ್ದಾರರು, ದಿನಾಂಕ 5–01–1998 ರಂದು ಚಂಡೂರು ಗ್ರಾಮದ ಸ. ನಂ. : 22ಎ ವಿಸ್ತೀರ್ಣ 2–00 ಎಕರೆ ಜಮೀನಿಗೆ ಸಂಬಂಧಿಸಿದಂತೆ ಮಾಡಿದ ಆದೇಶ ರದ್ದುಪಡಿಸಿ ವಿವಾದಿತ ಜಮೀನಿನ ಹಕ್ಕು ಬದಲಾವಣೆಯನ್ನು ಅರ್ಜಿದಾರರಾದ ಶ್ರೀ ಎಂ. ತಿಪ್ಪಾರೆಡ್ಡಿ ಇವರ ಹೆಸರಿಗೆ ಮಾಡಿದ ಆದೇಶ ರದ್ದುಪಡಿಸಲು ಕೋರಿ ಕರ್ನಾಟಕ ಭೂ ಕಂದಾಯ ಕಾಯಿದೆ ಕಲಂ 128 ಮತ್ತು 129 ರಂತೆ ವಿಚಾರಣೆ ನಡೆಸದೇ ಅಧಿಕಾರ ವ್ಯಾಪ್ತಿ ಮೀರಿ ನಡೆದುಕೊಂಡಿರುವುದು.

ಶ್ರೀ ಕೆ.ನರಸಿಂಹ ಇವರ ಮೇಲಿನ ಆರೋಪಗಳು ಕುರಿತು ವಿಚಾರಣೆ ನಡೆಸಿ ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ವಿಚಾರಣಾ ವರದಿ ಸಲ್ಲಿಸಿದ ವಿಚಾರಣಾಧಿಕಾರಿಗಳು ಆರೋಪಿತರ ಮೇಲಿನ ಎಲ್ಲಾ ಆರೋಪಗಳು ಸಾಬೀತಾಗಿವೆಂದು ಅಭಿಪ್ರಾಯ ಪಡುತ್ತಾ, ಸದರಿ ನೌಕರರು ತಮ್ಮ ಅಧಿಕಾರದ ವ್ಯಾಪ್ತಿ ಮೀರಿ ಪಿಟಿಸಿಎಲ್ ಕಾಯ್ದೆ ಕಲಂ 5, ಕರ್ನಾಟಕ ಭೂ ಕಂದಾಯ ಕಲಂ 108ಡಿ, ಕರ್ನಾಟಕ ಮುದ್ರಾಂಕ ಕಾನೂನು 1957, ಕರ್ನಾಟಕ ಗ್ರಾಮಾಧಿಕಾರಿಗಳ ಹುದ್ದೆ ರದ್ದತಿ ಕಾಯ್ದೆ 1961, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಹಾಗೂ ಕರ್ನಾಟಕ ಭೂ ಕಂದಾಯ ಕಾನೂನು 1964 ಮತ್ತು ನಿಯಮಗಳು 1966ರ ವಿವಿಧ ಕಲಂಗಳಡಿಯಲ್ಲಿ ಅವಕಾಶವಿರದ ಅಧಿಕಾರಗಳನ್ನು ಚಲಾಯಿಸಿ ನಿಯಮಗಳ ಸ್ಪಷ್ಟ ಉಲ್ಲಂಘನೆ ಮಾಡುವ ಮೂಲಕ ಕರ್ತವ್ಯಲೋಪ ಎಸಗಿ ಅಧಿಕಾರ ದುರುಪಯೋಗಿಸಿಕೊಂಡಿರುವುದು ಸಾಬೀತಾಗಿರುವುದಾಗಿ ದೃಢಪಡಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿಯ ನಿರ್ಣಯಗಳ ಬಗ್ಗೆ ಆರೋಪಿ ನೌಕರರಾದ ಶ್ರೀ ಕೆ.ನರಸಿಂಹ ಇವರಿಗೆ 2ನೇ ಕಾರಣ ಕೇಳುವ ನೋಟೀಸ್ ನೀಡಿ ಅವರಿಂದ ಪಡೆಯಲಾದ ಸಮಜಾಷಿಯಡಿಯಲ್ಲಿ ತಮ್ಮನ್ನು ಸಮರ್ಥಿಸಿಕೊಳ್ಳುವಂತೆ ಯಾವುದೇ ಅಂಶಗಳನ್ನು ಆರೋಪಿತ ನೌಕರರು ಪ್ರಸ್ತುತ ಪಡಿಸದಿರುವುದನ್ನು ಅವಲೋಕಿಸಿ, ವಿವಿಧ ಕಾನೂನುಗಳನ್ನು ಉಲ್ಲಂಘಿಸಿ ಗುರುತರ ಕರ್ತವ್ಯಲೋಪ ಎಸಗುವ ಮೂಲಕ ಅಧಿಕಾರ ದುರುಪಯೋಗ ಪಡಿಸಿಕೊಂಡಿರುವುದು ಸಾಬೀತಾದ ಹಿನ್ನೆಲೆಯಲ್ಲಿ ಶ್ರೀ ಕೆ.ನರಸಿಂಹ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ನಿಯಮ 8(ಞು) ರನ್ವಯ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಮೇಲೆ ಕ್ರಮ ಸಂಖ್ಯೆ 3ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಪ್ರಾದೇಶಿಕ ಆಯುಕ್ತರು (ಪ್ರಭಾರ) ಆದೇಶಿಸಿರುತ್ತಾರೆ.

ಸರ್ಕಾರಿ ಸೇವೆಯಿಂದ ವಜಾಗೊಳಿಸಲಾದ ಗುಲ್ಬರ್ಗ ಪ್ರಾದೇಶಿಕ ಆಯುಕ್ತರ ಆದೇಶದ ವಿರುದ್ಧ ವಜಾಗೊಂಡ ನೌಕರರಾದ ಶ್ರೀ ಕೆ. ನರಸಿಂಹ ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ನಿಯಮ–18ರನ್ವಯ ಸರ್ಕಾರಕ್ಕೆ ಸಲ್ಲಿಸಿರುವ ಮೇಲೆ ಕ್ರಮ ಸಂಖ್ಯೆ 4ರಲ್ಲಿ ಓದಲಾದ ಮೇಲ್ಮನವಿಯಲ್ಲಿ ಶ್ರೀ ಕೆ.ನರಸಿಂಹ ಇವರು ಶಿರಸ್ತೇದಾರ ವೃಂದದ ನೌಕರರಿಗೆ ಶಿಸ್ತು ಪ್ರಾಧಿಕಾರಿಯಾದ ಗುಲ್ಬರ್ಗ ಪ್ರಾದೇಶಿಕ ಆಯುಕ್ತರ ಪ್ರಭಾರದಲ್ಲಿದ್ದ ಅಧಿಕಾರಿಗೆ ದಂಡನೆ ವಿಧಿಸಲು ಅಧಿಕಾರವಿರುವುದಿಲ್ಲವೆಂದು ಆಕ್ಷೇಪಿಸಿದ್ದನ್ನು ಪರಿಶೀಲಿಸಲಾಯಿತು. ಈ ಸಂಬಂಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಸೇವಾ ನಿಯಮಗಳ ಅಭಿಪ್ರಾಯ ಪಡೆಯಲಾಗಿ ಈ ಕೆಳಕಂಡಂತಿದೆ.

"ಈ ಕುರಿತಂತೆ ನ್ಯಾಯಮೂರ್ತಿ ಶ್ರೀ ಎಂ. ರಾಮಾಜೋಯ್ಸ್ ಅವರ "ಖಜಡಿತುಭಿಜ ಣಟಿಜಜಡಿ ಣುಜ ಖಣಚಿಣಜ" ನ (೨೩) ನೇ ಅಧ್ಯಾಯದಲ್ಲಿ ಕೆಳಕಂಡಂತೆ ವಿವರಿಸಲಾಗಿದೆ.

> "Power to act as a disciplinary authority is a statutory power. An officer placed in current charge of the duties of a post cannot exercise the statutory power vested in the disciplinary authority and therefore is not competent to act as the disciplinary authority"

ಈ ಕಾರಣಕ್ಕಾಗಿ ಪ್ರಸ್ತುತ ಪ್ರಕರಣದಲ್ಲಿ ಹೊರಡಿಸಿರುವ ದಂಡನಾದೇಶವು ಲೀಗಲಿ ವ್ಯಾಲಿಡ್ (ಐಜಚಿಟಟಥಿ ತಿಚಿಟುಜ) ಆಗಿರುವುದಿಲ್ಲ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ ನಿಯಮ 26ರಡಿಯಲ್ಲಿ ಈ ದಂಡನಾದೇಶವನ್ನು ಪುನರ್ ಪರಿಶೀಲಿಸಬಹುದಾಗಿದೆ".

ಈ ಕಾರಣಕ್ಕಾಗಿ ಪ್ರಸ್ತುತ ಪ್ರಕರಣದಲ್ಲಿ ಶ್ರೀ ಕೆ.ನರಸಿಂಹ ಇವರಿಗೆ ಪ್ರಾದೇಶಿಕ ಆಯುಕ್ತರು (ಪ್ರಭಾರ) ಗುಲ್ಬರ್ಗ ಇವರು ವಿಧಿಸಿದ ದಂಡನಾದೇಶವು ಕಾನೂನಿನ ಅನುಸಾರ ಅಸಿಂಧು ಆದೇಶವಾಗಿರುವ ಹಿನ್ನೆಲೆಯಲ್ಲಿ ಹಾಗೂ ಸದರಿ ನೌಕರರ ವಿರುದ್ಧ ಮಾಡಲಾದ ಎಲ್ಲಾ ಗುರುತರ ಆರೋಪಗಳು ಸಾಬೀತಾಗಿರುವುದು ಸ್ಪಷ್ಟವಾಗಿರುವ ಮೇರೆಗೆ ಶ್ರೀ ಕೆ.ನರಸಿಂಹ ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ನಿಯಮ–18 ರಡಿಯಲ್ಲಿ ಸಲ್ಲಿಸಿರುವ ಮೇಲ್ಮನವಿಯನ್ನು ಸರ್ಕಾರಕ್ಕೆ ಸ್ವಾಭಾವಿಕವಾಗಿ ಪ್ರದತ್ತವಾದ ಅಧಿಕಾರದನ್ವಯ ಅದೇ ನಿಯಮಗಳ ನಿಯಮ–26ರಡಿಯಲ್ಲಿ ಪುನರ್ ಪರಿಶೀಲಿಸಿ, ರಾಜ್ಯ ಸರ್ಕಾರ ಒಂದು ಮೇಲ್ಮನವಿ ಬಗ್ಗೆ ಆದೇಶ ಮಾಡುವ ಅಥವಾ ನಿರೀಕ್ಷಣೆಯಲ್ಲಿರುವ ಅಥವಾ ಪನರಾವಲೋಕನೆಯಲ್ಲಿರುವ ಆದೇಶವನ್ನು ಮಾರ್ಪಡಿಸುವ ಬಗೆಗಿನ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನಾ) ವಿನಿಮಯಗಳು 2000ರ ವಿನಿಯಮ 5(1)(ಎ)ರಂತೆ ಅವಶ್ಯಕವಾದ ಸಹಮತಿಯನ್ನು ಕೋರಿ ಕರ್ನಾಟಕ ಲೋಕಸೇವಾ ಆಯೋಗಕ್ಕೆ ಸಲ್ಲಿಸಲಾದ ಪ್ರಸ್ತಾವನೆಯನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ ಎಂದು ಮೇಲೆ ಕ್ರಮ ಸಂಖ್ಯೆ 5ರ ಪತ್ರದಲ್ಲಿ ತಿಳಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 590 ಬಿಎಂಎಂ 2007, ಬೆಂಗಳೂರು, ದಿನಾಂಕ:18ನೇ ಅಕ್ಟೋಬರ್ 2010**

ಪ್ರಸ್ತಾವನೆ ಭಾಗದಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ನರಸಿಂಹ, ವಜಾಗೊಂಡ ಶಿರಸ್ತೇದಾರ ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ನಿಯಮ–18ರನ್ವಯ ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 23–10–2007ರ ಮೇಲ್ಮನವಿಯನ್ನು ಅದೇ ನಿಯಮಗಳ ನಿಯಮ–26 ರಡಿಯಲ್ಲಿ ಪುನರ್ ಪರಿಶೀಲಿಸಿ, ಗುಲ್ಬರ್ಗ ಪ್ರಾದೇಶಿಕ ಆಯುಕ್ತರು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ನಿಯಮ 8(iii)ರಂತೆ ತಮ್ಮ ಆದೇಶ ಸಂಖ್ಯೆ:ಕಂ/ಪ್ರಾಆಗು/ಶಿಸ್ತು/02–06–07, ದಿನಾಂಕ 25–09–2007 ರನ್ವಯ ಶ್ರೀ ನರಸಿಂಹ, ಶಿರಸ್ತೇದಾರ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಿ ವಿಧಿಸಿದ ದಂಡನಾದೇಶವನ್ನು ಪುನರಾವಲೋಕಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು–1958ರ ನಿಯಮ 214(1)(ಎ) ರನ್ವಯ ಸದರಿ ನೌಕರರ ಪೂರ್ಣ ನಿವೃತ್ತಿ ವೇತನವನ್ನು ಶಾಶ್ವತವಾಗಿ ತಡೆಹಿಡಿದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–ಎ)

ಪಿ.ಆರ್.2791

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಒಂದು ಸಂಖ್ಯಾತಿರಿಕ್ತ (ಸೂಪರ್ ನ್ಯೂಮರರಿ) ನಿರ್ದೇಶಕರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ:9031/2005ರಲ್ಲಿ ದಿನಾಂಕ: 23–11–2009ರಂದು ಮಾಡಿರುವ ಆದೇಶ

2. ಡಾ: ಆರ್. ಶ್ರೀರಂಗಮ್ಮ, ಇವರ ಮನವಿ ದಿನಾಂಕ:08–01–2010

**ಪ್ರಸ್ತಾವನೆ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಸೂಚನೆ ಸಂಖ್ಯೆ ಆಕುಕ 57 ಎಂಎಂಸಿ 99 ದಿನಾಂಕ 30–07–1999ರಲ್ಲಿ, ಡಾ: ಆರ್. ಶ್ರೀರಂಗಮ್ಮ, ನಿವೃತ್ತ ಪ್ರಾಂಶುಪಾಲರು, ಬೆಂಗಳೂರು ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು ಇವರಿಗೆ ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾಗಿರುವ ಡಾ:ಎಂ.ವಿ. ರಾಮಣ್ಣ ನಿವೃತ್ತ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಹಾಗೂ ಸರ್ಕಾರದ ಅಪರ ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಇಲಾಖೆ ಇವರಿಗೆ ಪ್ರಾಂಶುಪಾಲರ ಹುದ್ದೆಗೆ ಮುಂಬಡ್ತಿ ನೀಡಿರುವ ದಿನಾಂಕ ಅಂದರೆ 29–07–1991 ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿ) ನಿಯಮಾವಳಿ 1978ರ ನಿಯಮ 2(2)ರ ಮೇರೆಗೆ ಪ್ರಾಂಶುಪಾಲರ ಹುದ್ದೆಗೆ ಸ್ಥಾನಾಪನ್ನ ಬಡ್ತಿ ನೀಡಲಾಗಿದೆ. ಡಾ: ಆರ್. ಶ್ರೀರಂಗಮ್ಮ ಇವರಿಗಿಂತ ಡಾ: ಎಂ.ವಿ. ರಾಮಣ್ಣ ಇವರು ಜೇಷ್ಠತೆಯಲ್ಲಿ ಕಿರಿಯರಾಗಿದ್ದು, ಸದರಿಯವರನ್ನು ದಿನಾಂಕ 01–11–1992 ರಿಂದ ಜಾರಿಗೆ ಬರುವಂತೆ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿ ನೇಮಕಾತಿ ಮಾಡಲಾಗಿದೆ. ಅದರಂತೆ ತಮಗೂ ಸಹ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವಂತೆ ಕೋರಿದ್ದುದನ್ನು ಪರಿಗಣಿಸದೇ ಇದ್ದುದರಿಂದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ 9031/2005 ಸಲ್ಲಿಸಿ ಪ್ರಶ್ನಿಸಿದ್ದರು.

ಕರ್ನಾಟಕ ಆಡಳಿತ ನ್ಯಾಯಮಂಡಳಿಯು, ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಡಾ: ಆರ್. ಶ್ರೀರಂಗಮ್ಮ ಇವರಿಗೆ ಡಾ: ಎಂ.ವಿ. ರಾಮಣ್ಣ ಇವರಿಗೆ ವೈದ್ಯಕೀಯ ಶಿಕ್ಷಣ ನಿರ್ದೇಶಕರಾಗಿ ಬಡ್ತಿ ನೀಡಿದ ದಿನಾಂಕದಿಂದಲೇ ಪೂರ್ವಾನ್ವಯವಾಗಿ ನಿರ್ದೇಶಕರ ಹುದ್ದೆಗೆ ಬಡ್ತಿಯನ್ನು ನೀಡುವಂತೆ ಆದೇಶಿಸಿದೆ. ಮೇಲೆ (2)ರಲ್ಲಿ ಓದಲಾದ ಮನವಿಯಲ್ಲಿ, ಡಾ: ಆರ್. ಶ್ರೀರಂಗಮ್ಮ ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ ಉಲ್ಲೇಖಿಸಿ ತಮಗೂ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡುವಂತೆ ಕೋರಿರುತ್ತಾರೆ. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಂತೆ, ಡಾ: ಎಂ. ವಿ. ರಾಮಣ್ಣ ಅವರಿಗೆ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿ ನೇಮಕಾತಿಯನ್ನು ಮಾಡಿದ ದಿನಾಂಕ:01–11–1992 ರಿಂದ ಡಾ: ಆರ್. ಶ್ರೀರಂಗಮ್ಮ ಇವರಿಗೂ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿ ನೇಮಕಾತಿ ಮಾಡಬೇಕಾದ ಅವಶ್ಯಕತೆ ಉದ್ಭವಿಸಿರುವುದರಿಂದ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ರೂ.4550–5600ಗಳ ವೇತನ ಶ್ರೇಣಿಯ ಒಂದು ಸಂಖ್ಯಾತಿರಿಕ್ತ ನಿರ್ದೇಶಕರ ಹುದ್ದೆಯನ್ನು ದಿನಾಂಕ 01–11–1992 ರಿಂದ ಡಾ: ಆರ್. ಶ್ರೀರಂಗಮ್ಮ ವಯೋನಿವೃತ್ತಿಯ ಮೇರೆಗೆ ನಿವೃತ್ತಿ ಹೊಂದಿದ ದಿನಾಂಕ 31–12–1994ರವರೆಗೆ ಸೃಜಿಸಬೇಕಾಗಿರುತ್ತದೆ.

ಈ ವಿಷಯವನ್ನು ಕೂಲಂಕಶವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸೇಇಮು 2010 ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ದಿನಾಂಕ 01–11–1992 ರಿಂದ 31–12–1994 ರವರೆಗೆ ರೂ.4550–5600ಗಳ ವೇತನ ಶ್ರೇಣಿಯ ಒಂದು ಸಂಖ್ಯಾತಿರಿಕ್ತ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಹುದ್ದೆಯನ್ನು ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1169 ಸೇವೆಗಳು–1 2010, ದಿನಾಂಕ 06–08–2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವೆಗಳು–3)

ಪಿ.ಆರ್.2792

## ವಸತಿ ಸಚಿವಾಲಯ

**ವಿಷಯ** : ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ವಇ 16 ಹೆಚ್ಎಹೆಚ್ 2010, ದಿನಾಂಕ 27-03-2010.

2) ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ಮುಮಕಾ/6069/2010, ದಿನಾಂಕ 05-10-2010.

**ಪ್ರಸ್ತಾವನೆ :**

ಕಳೆದ ವರ್ಷ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಸುರಿದ ಭಾರಿ ಮಳೆ ಮತ್ತು ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡವರಿಗೆ "ಆಸರೆ" ಯೋಜನೆಯಡಿ ಮನೆಗಳನ್ನು ನಿರ್ಮಿಸಲಾಗುತ್ತಿದೆ. ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕು ನಂದಗೇರಿ ಗ್ರಾಮದಲ್ಲಿ 147 ಮನೆಗಳನ್ನು ನಿರ್ಮಿಸಲು ಕರ್ನಾಟಕ ಗೃಹ ಮಂಡಳಿಗೆ ವಹಿಸಲಾಗಿತ್ತು. ಉದ್ದೇಶಿತ ಆಸರೆ ಮನೆಗಳ ಕಾಮಗಾರಿಯ ಪ್ರದೇಶವು ಕರ್ನಾಟಕ ಗೃಹ ಮಂಡಳಿ, ಬಿಜಾಪುರ ಉಪ ವಿಭಾಗಕ್ಕೆ ದೂರದಲ್ಲಿರುವುದರಿಂದ, ಕಾರ್ಯ ನಿರ್ವಾಹಣಾಧಿಕಾರಿಗಳು, ಗ್ರಾಮೀಣ ನಿರ್ಮಿತಿ ಕೇಂದ್ರ ಸಿಂಧಗಿ ಇವರಿಗೆ ವರ್ಗಾಯಿಸಿಕೊಡುವಂತೆ ಆಯುಕ್ತರು ಕರ್ನಾಟಕ ಗೃಹ ಮಂಡಳಿ ಇವರು ಕೋರಿರುತ್ತಾರೆ. ಮನೆಗಳ ನಿರ್ಮಾಣ ಕೈಗೊಳ್ಳಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 16 ಹೆಚ್ಎಹೆಚ್2010, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2010**

ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ಕರ್ನಾಟಕ ಗೃಹ ಮಂಡಳಿಗೆ ವಹಿಸಿಕೊಟ್ಟ ಬಿಜಾಪುರ ಸಿಂಧಗಿ ತಾಲ್ಲೂಕು ನಂದಗೇರಿ ಗ್ರಾಮದ 147 ಆಸರೆ ಮನೆಗಳ ನಿರ್ಮಾಣ ಕಾರ್ಯವನ್ನು ಕಾರ್ಯನಿರ್ವಾಹಣಾಧಿಕಾರಿಗಳು, ಗ್ರಾಮೀಣ ನಿರ್ಮಿತಿ ಕೇಂದ್ರ ಸಿಂಧಗಿ ಇವರಿಂದ ನಿರ್ವಹಿಸಲು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ವಲ್ಲೂರ**

ಪಿ.ಆರ್. 2793 ಪೀಠಾಧಿಕಾರಿ-2, ವಸತಿ ಇಲಾಖೆ

## ಯುವಜನ ಸೇವಾ ಸಚಿವಾಲಯ

**ವಿಷಯ** : ಶ್ರೀ ಕೆ. ಶ್ರೀಧರ್, ಏರ್‌ಕ್ರಾಫ್ಟ್‌ಹ್ಯಾಂಡ್, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಬೆಂಗಳೂರು, ಇವರ ಪತ್ನಿಯ ವೈದ್ಯಕೀಯ ವೆಚ್ಚವನ್ನು ಹಿಂಬರಿಸುವ ಬಗ್ಗೆ.

**ಓದಲಾಗಿದೆ** : 1) ನಿರ್ದೇಶಕರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಬೆಂಗಳೂರು, ಅವರ ಪತ್ರಸಂಖ್ಯೆ: ಎಫ್‌ಟಿಎಸ್ 7 ಇಎಸ್‌ಟಿ/90-91, ದಿನಾಂಕ: 27-04-2010.

2) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಅವರ ಪತ್ರ ಸಂಖ್ಯೆ: ಎಂಡಿಎ (ಬೆಂ1) 1112/09-10, ದಿನಾಂಕ: 19-04-2010.

**ಪ್ರಸ್ತಾವನೆ :**

ನಿರ್ದೇಶಕರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಬೆಂಗಳೂರು, ಇವರು ಮೇಲೆ ಓದಲಾದ ದಿನಾಂಕ: 27-04-2010 ಪತ್ರದಲ್ಲಿ ಶ್ರೀ ಕೆ. ಶ್ರೀಧರ್, ಏರ್‌ಕ್ರಾಫ್ಟ್ ಹ್ಯಾಂಡ್, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಬೆಂಗಳೂರು, ಇವರ ಪತ್ನಿ ಶ್ರೀಮತಿ ಪ್ರಭಾವತಿರವರು ಹೆರಿಗೆಗಾಗಿ ಸರ್ಕಾರದಿಂದ ಮಾನ್ಯತೆ ಪಡೆಯದ ಮೆಡಿಸ್ಕೋಪ್ ಆಸ್ಪತ್ರೆ ಪ್ರೈವೇಟ್ ಲಿಮಿಟೆಡ್, ನಂ 11, ಪಿಳ್ಳಣ ಗಾರ್ಡನ್, 3ನೇ ಹಂತ, ಬೆಂಗಳೂರು, ಇಲ್ಲಿ ಒಳರೋಗಿಯಾಗಿ ಚಿಕಿತ್ಸೆ ಪಡೆದಿದ್ದು, ಈ ಬಗ್ಗೆ ಸಂಪರ್ಕಿಸಲ್ಪಟ್ಟ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಅವರು ಈ ಪ್ರಕರಣದಲ್ಲಿ ಸರ್ಕಾರಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಿದ್ದ ಪಕ್ಷದಲ್ಲಿ ರೂ. 4,000/- ವೆಚ್ಚವಾಗುತ್ತಿತ್ತೆಂದು ತಿಳಿಸಿ, ಸದರಿ ಮೊತ್ತವನ್ನು ಮರುಪಾವತಿಸಲು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಾವಳಿ 1963ರ ನಿಯಮ 14 ಅನ್ನು ಸಡಿಲಿಸಿ, ಸದರಿ ಮೊತ್ತವನ್ನು ಹಿಂಬರಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 14 ಯುರಾಸೇ 10, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2010**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 31ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅದೇ ನಿಯಮಾವಳಿಯ ನಿಯಮ 14ನ್ನು ಸಡಿಲಿಸಿ ಶ್ರೀ ಕೆ. ಶ್ರೀಧರ್, ಏರ್‌ಕ್ರಾಫ್ಟ್ ಹ್ಯಾಂಡ್, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಬೆಂಗಳೂರು, ಇವರ ಪತ್ನಿ ಶ್ರೀಮತಿ ಪ್ರಭಾವತಿರವರು ಹೆರಿಗೆಗಾಗಿ ಸರ್ಕಾರದಿಂದ ಮಾನ್ಯತೆ ಪಡೆಯದ ಮೆಡಿಸ್ಕೋಪ್ ಆಸ್ಪತ್ರೆ ಪ್ರೈವೇಟ್ ಲಿಮಿಟೆಡ್, ನಂ 11, ಪಿಳ್ಳಣ್ಣ ಗಾರ್ಡನ್, 3ನೇ ಹಂತ, ಬೆಂಗಳೂರು, ಇಲ್ಲಿ ಒಳರೋಗಿಯಾಗಿ ಪಡೆದ ಚಿಕಿತ್ಸೆಗೆ ವೆಚ್ಚ ಮಾಡಿದ ಮೊತ್ತದ ಪೈಕಿ ರೂ. 4,000/- (ನಾಲ್ಕು ಸಾವಿರ ರೂಪಾಯಿಗಳು) ಗಳನ್ನು ಮಾತ್ರ ವೈದ್ಯಕೀಯ ವೆಚ್ಚವಾಗಿ ಮರು ಪಾವತಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಸದರಿ ಮೊತ್ತವನ್ನು ಪಾವತಿ ಮಾಡುವ ಮುನ್ನ ಈ ವೆಚ್ಚವನ್ನು ಹಿಂಪಡೆಯಲು ಹಿಂದೆ ಅರ್ಜಿ ಸಲ್ಲಿಸದಿರುವ, ಸದರಿ ವೈದ್ಯಕೀಯ ವೆಚ್ಚವನ್ನು ವಿಮಾ ಸಂಸ್ಥೆ, ಇತ್ಯಾದಿ ಇತರ ಯಾವುದೇ ಮೂಲದಿಂದ ಹಿಂಪಾವತಿ ಪಡೆದಿರುವುದಿಲ್ಲವೆಂಬ ಕುರಿತು ನೌಕರರಿಂದ ಲಿಖಿತವಾಗಿ ಘೋಷಣೆಯನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಸಂಖ್ಯೆ: ಸಿಆಸುಇ 496 ಸೇನಿಎಫ್ 2010, ದಿನಾಂಕ: 20-09-2010 ಹಾಗೂ ಸಂಖ್ಯೆ: ಆಇ 1486 ಸೇ-1/10, ದಿನಾಂಕ: 04-10-2010 ರಲ್ಲಿ ಸಿ.ಆಸು.ಇ. (ಸೇವಾ ನಿಯಮಗಳು) ಹಾಗೂ ಆರ್ಥಿಕ ಇಲಾಖೆಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎಸ್. ಶಿವರಾಮ್)**

ಪಿ.ಆರ್. 2794 ಸರ್ಕಾರದ ಅಧೀನ ಕಾರ್ಯದರ್ಶಿ,

ಯುವಜನ ಸೇವಾ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ರಾಯಚೂರು ಜಿಲ್ಲೆ, ಲಿಂಗಸಗೂರ ತಾಲ್ಲೂಕಿನ ಬುದ್ದಿನ್ನಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ/ 2010–11/3975, ದಿನಾಂಕ 12–07–10.

**ಪ್ರಸ್ತಾವನೆ :**

ರಾಯಚೂರು ಜಿಲ್ಲೆ, ಲಿಂಗಸಗೂರ ತಾಲ್ಲೂಕಿನ ಬುದ್ದಿನ್ನಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಕೊಳ್ಳಲಾದ ತೆರೆಭಾವಿ ಮತ್ತು ಬುದ್ದಿನ್ನಿ ಗ್ರಾಮಗಳ ಜಮೀನುಗಳಿಗೆ ಲಿಂಗಸಗೂರ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ ಪರಿಹಾರ ಪಾವತಿಸಲು ರೂ. 22,13,629–00 ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 12–07–10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 19–12–2002ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ 26–02–04ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಲಿಂಗಸಗೂರು ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಕೆಳಕಂಡ ಎಲ್.ಎ.ಸಿ. ಪ್ರಕರಣಗಳನ್ನು ಸಲ್ಲಿಸಿದ್ದಾರೆ. ಸಿವಿಲ್ ನ್ಯಾಯಾಲಯವು ದಿನಾಂಕ 08–01–08 ರಂದು ನೀಡಿರುವ ಆದೇಶದಲ್ಲಿಹೆಚ್ಚಿನ ಪರಿಹಾರಧನ ನಿಗದಿಪಡಿಸಿದೆ. ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ.

| ಕ್ರ ಸಂ | ಎಲ್ಎಸಿ | ಸ.ನಂ. | ಗ್ರಾಮ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ. ಗಳಲ್ಲಿ) |
|---|---|---|---|---|---|
| 1 | 198/06 | 22/3 | ತೆರೆಭಾವಿ | 1–10 | 157122 |
| 2 | 202/6 | 21/3/1/<br>21/3/2/ | ತೆರೆಭಾವಿ | 1–12 | 163386 |
| 3 | 199/06 | 1/1 | ತೆರೆಭಾವಿ | 1–10 | 18262 |
| 4 | 200/06 | 4<br>5<br>4<br>5 | <br><br>ಬುದ್ದಿನ್ನಿ | 2–12<br>5–37<br>1–30<br>0–25 | 1031070<br><br>183339 |
| 5 | 201/06 | 113/೦,ಅ<br>11/ ೦,ಅ | ಬುದ್ದಿನ್ನಿ | 1–00<br>1–20 | 125796<br>176002 |
| 6 | 203/06 | 6/ ೦, 6/ಃ<br>6/ಅ | ಬುದ್ದಿನ್ನಿ | 2–20 | 313745 |
| 7 | 205/06 | 10/ 3೦,<br>10/3ಃ | ಬುದ್ದಿನ್ನಿ | 0–25 | 44907 |
| | | | | ಒಟ್ಟು | 2213629 |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 1225 ಎಲ್‌ಸಿಜಿ 2008, ದಿನಾಂಕ 06–03–09ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿವಿಧಾನಗಳಂತೆ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 105 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಯಚೂರು ಜಿಲ್ಲೆ, ಲಿಂಗಸಗೂರ ತಾಲ್ಲೂಕಿನ ಬುದ್ದಿನ್ನಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತೆರೆಭಾವಿ ಮತ್ತು ಬುದಿನ್ನಿ ಗ್ರಾಮಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ : 198, 202, 199, 200, 201, 203, 205/06ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 22,13,629–00 ಗಳನ್ನು (ಇಪ್ಪತ್ತೆರಡು ಲಕ್ಷದ ಹದಿಮೂರು ಸಾವಿರದ ಆರುನೂರ ಇಪ್ಪತ್ತೊಂಭತ್ತು ರೂ. ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00– ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಗೋಪಾಲ್)**

ಪಿ.ಆರ್. 2795

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## DEPARTMENT OF PESONNEL ADMINISTRATIVE & REFORMS SECRETARIAT

**Sub :-** Nomination if additional members to the Non-Resident Indian's Committee Karnataka, Bangalore -regarding

**Read :-** 1) G.O. No. DPAR 68 GAM 2008, dated : 05.08.2008

2) G.O. No. DPAR 58 GAM 2009, dated : 23-06-2009

3) G.O. No. DPAR 74 GAM 2009, dated : 27-08-2009

4) Note No. NRIK/MS/25/2010, dated 13-09-2010

***

**Preamble:**

In the Government order dated, 05-08-2008, read at (1) above, sanction was accorded for the establishment of Non-Resident Indian's Committee, Karnataka, Bangalore, and to the said Committee 16 members were nominated.

In the Government Order, dated 23-06-2009, read at (2) above, 3 Non-Resident Indians and 6 Officers were nominated as members of NRI Committee in addition to the existing members.

In the Government Order, dated 27-08-2010, read at (3) above, Sri Arvind Patil has been nominated to the above Committee as " Special Representative to represent the Kannadigas of Doha-Qatar (UAE).

The Member-Secretary, NRI's Committee, Karnataka, Bangalore, in his note dated 13-09-2010, cited at (4) above, has requested to nominate the Officers working against the following designated posts as permanent members of the NRIs Committee, Karnataka, Bangalore, for smooth functioning of the Committee and in order to get assistance for the development of State's Primary and Secondary education through NRIs/returned NRIs.

1. Principal Secretary to Government/Secretary to Government (Primary and Secondary), Education Department. Government of Karnataka.
2. Joint Secretary to Government of India (Financial Services) Ministry of Overseas Indian Affairs.

The Government, after considering the above proposal, in order to facilitate the NRI Committee, Karnataka, to function more effectively has decided to include Officers working against the above said designated posts as members in the NRI Committtee, Karnataka Bangalore, Hence this Order.

**Government Order No. No. DPAR 85 GAM 2009, Bangalore, dated : 11th November, 2010**

In view of the reasons explained in the proposal of the NRI Committee, Karnataka, Bangalore, Government hereby nominate the officers working against the following designated posts as permanent members of the NRIs Committee, Karnataka, Bangalore, with immediate effect and until further Orders.

1. Principal Secretary to Government/Secretary to Government (Primary and Secondary), Education Department. Government of Karnataka.
2. Joint Secretary to Government of India (Financial Services) Ministry of Overseas Indian Affairs.

By Order and in the name of the Governor of Karnataka

**K.RAHAMATHULLA**

P.R. 2796

Under Secretary to Government

DPAR (State Protocal)

## INFRASTRUCTURE DEVELOPMENT SECRETARIAT

**Sub :-** Release of State Share towards Bidar Gulbarga New Railway Line Project.

**Read :-** 1) G.O. No. IDD 12 NSW 2004, dated : 05.09.2007

2) G.O. No. IDD 12 NSW 2004, dated : 28.09.2007

3) G.O. No. IDD 12 NSW 2004, dated : 21-01.2008

4) G.O. No. IDD 12 NSW 2008, dated : 13.05.2008

5) G.O. No. IDD 12 NSW 2008, dated : 26.06.2009

6) G.O. No. IDD 13 NSW 2008, dated : 21-08.2010

7) Letter No. W. Con/352/C/368 dated 04-10-2010 from the Chief Engineer/Constn.-1, South Central Railway, Secundrabad.

***

**Preamble:**

In the Government order read at SI. No. (1) above, the State Government has accorded sanction for taking up Bidar-Gulabarga new railway project on 50:50 cost sharing basis between the Ministry of Railways and Government of Karnataka and for releasing 50% of the cost required for completion of the project within a period of 3 years.

2. In the GO. Read at SI. No. (2) to (6) above the State Government has released so far an amount of Rs. 95.00 crore towards the share of the State Government for Bidar-Gulbarga New railway project.

3. The South Central Railway vide their letter read at SI. No. (7) above, has stated that an amount of Rs. 30 crore is very much essential to finalise the aove railway line. South Cental Railway also provide Rs 30 crores towards construction of new line is targeted during 2010-11 and have requested to take up these works at a fast pace, it is necessary that Government of Karnataka deposit at least Rs. 30.00 crore in the current year to meet the current liabilities and to call for additional tenders.

4. The request has been examined in detail and hence this Order.

**Government Order No. IDD 13 NSW 2008, Bangalore, dated : 12th November, 2010**

After careful examination of the request of railways, Government of Karnataka is pleased to release an amount of Rs. 20.00 crores (Rupees Twenty crores only) towards the share of the State Government for the Bidar-Gulbarga new railway project.

2 The expenditure shall be met under the Head of Account 5465-01-190-3-10- (Plan) 133-Bidar-Gulbarga Railway line-SDP Rs. 12.50 crores and Head of Account 5465-01-190-3-10-422 Special Component Plan Rs. 5.00 crores and Head of Account 5465-01-190-3-10-423 tribal sub-plan Rs. 2.50 crores, total an amount of Rs. 20.00 crore during 2010-11.

3 The Chief Executive Officer, K.RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the financial Advisor and Chief Accounts Officer (Construction), South Central Railway, Secunderabad.

4 This order is issued with concurrence of Finance Department vide U.O. Note. No. FD 1732 Exp-I/2010 dated 29-10-2010.

By Order and in the name of the Governor of Karnataka

**C.A. BABURAVINDRANATH PATEL**

Under Secretary to Government

Infrastructure Development Department.

P.R. 2797

## ಸಹಕಾರ ಸಚಿವಾಲಯ

**ವಿಷಯ :** ರೈತರ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ ಮಂಡ್ಯ ಇದರ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರು ಇವರ ಪತ್ರ ಸಂಖ್ಯೆ : ಎಂಕೆಟಿ–1/ಎಂಸಿಎಸ್–49/2010–11, ದಿನಾಂಕ: 8–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 8–10–2010 ರ ಪತ್ರದಲ್ಲಿ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಮಂಡ್ಯ ಇದರ ಆಡಳಿತ ಮಂಡಳಿಯಲ್ಲಿ ನ್ಯೂನತೆ ಉಂಟಾದ್ದರಿಂದ ಸಹಕಾರ ಸಂಘಗಳ ಉಪ ನಿಬಂಧಕರು, ಮಂಡ್ಯ ಇವರು ಸದರಿ ಸಂಘದ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31ರ ಪ್ರಕಾರ ರದ್ದುಪಡಿಸಿ ಆಡಳಿತ ಮಂಡಳಿಯ ಸ್ಥಾನದಲ್ಲಿ ವಿಶೇಷಾಧಿಕಾರಿಯವರನ್ನು 6 ತಿಂಗಳ ಅವಧಿಗೆ ನೇಮಿಸಿರುತ್ತಾರೆ. ನಂತರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ : 5–12–2010ರ ವರೆಗೆ ಇರುತ್ತದೆ. ಸಂಘದ ವಾರ್ಷಿಕ ಮಹಾ ಸಭೆಯು ದಿನಾಂಕ : 31–7–2010 ರಂದು ಜರುಗಿದ್ದು, ಮಹಾಸಭೆಯಲ್ಲಿ ವಿಶೇಷಾಧಿಕಾರಿಯವರ ಅವಧಿಯನ್ನು ಮಾರ್ಚ್ 2011ರ ವರೆಗೆ ವಿಸ್ತರಿಸುವಂತೆ ನಿರ್ಣಯ ಕೈಗೊಳ್ಳಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31 ರನ್ವಯ ವಿಶೇಷಾಧಿಕಾರಿಯವರ ಅವಧಿಯನ್ನು ಒಂದು ವರ್ಷದವರೆಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರಿಗೆ ಅವಕಾಶವಿದ್ದು, ತದನಂತರ ವಿಸ್ತರಿಸಬೇಕಾದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 121ರಡಿಯಲ್ಲಿ ವಿಶೇಷ

ಅಧಿಕಾರ ಚಲಾಯಿಸಿ ವಿಶೇಷಾಧಿಕಾರಿಯವರನ್ನು ನೇಮಿಸಬೇಕಾಗಿದೆ. ಆದ್ದರಿಂದ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರ ಪ್ರಸ್ತಾವನೆಯನ್ನು ಪರಿಗಣಿಸಿ ಸಂಘದ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ : 31–3–2011ರ ವರೆಗೆ ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 159 ಸಂಮಾಸ 2010, ಬೆಂಗಳೂರು, ದಿನಾಂಕ : 3–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1) ರನ್ವಯ ರೈತರ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಂಡ್ಯ ಇದರ ವಿಶೇಷಾಧಿಕಾರಿಗಳ ಅವಧಿಯನ್ನು ದಿನಾಂಕ : 31–3–2011 ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 31(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 31–3–2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ 31(1)ರ ಕಲಂ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ. ಆರ್. 2811

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಕಟ್ಟಡದಲ್ಲಿ ಖಾಲಿಯಿರುವ ಕೊಠಡಿಗಳನ್ನು ಕಾವಾ ಸಂಸ್ಥೆಯ ಉಪಯೋಗಕ್ಕೆ ನೀಡಿರುವುದನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ವಾಕೈ 12 ಕೈಯೋವಿ 2007, ದಿನಾಂಕ : 4–10–2007.
2. ಅಧಿಕ ನಿರ್ದೇಶಕರು, ಜಿಕೈಕೇರವರ ಪತ್ರ ಸಂಖ್ಯೆ : ಜಿಕೈಕೇ/ಸಿ2/ಚಾ.ತಾ.ಸಂ/ಕಾವಾ/37/2010–11, ದಿನಾಂಕ :26–10–2010.
3. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಕಸಂವಾಪ್ರ 108 ಕರಅ 2010, ದಿನಾಂಕ : 27–10–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವ್ಯಾಪ್ತಿಯಲ್ಲಿನ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ (ಸಿ.ಟಿ.ಐ.)ಯ ಕಟ್ಟಡದಲ್ಲಿನ ಮೂರು ಕೊಠಡಿಗಳನ್ನು ಹಲವು ಷರತ್ತಿಗೊಳಪಟ್ಟು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನದಲ್ಲಿರುವ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (ಕಾವಾ) ಸಂಸ್ಥೆಯ ತರಬೇತಿಗಳ ಉಪಯೋಗಕ್ಕಾಗಿ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಉಪಯೋಗಿಸಿಕೊಳ್ಳಲು ಷರತ್ತಿಗೊಳಪಟ್ಟು ಸರ್ಕಾರದ ಅನುಮತಿಯನ್ನು ನೀಡಲಾಗಿರುತ್ತದೆ. ಈ ಅವಧಿಯು ದಿನಾಂಕ : 3–10–2009 ಕ್ಕೆ ಅಂತ್ಯಗೊಂಡಿರುತ್ತದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ವಿದ್ಯಾರ್ಥಿಗಳ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗಲು ಕಾವಾ ಸಂಸ್ಥೆಯ ಸ್ವಂತ ಕಟ್ಟಡ ನಿರ್ಮಾಣಗೊಳ್ಳುವವರೆಗೆ ಈಗಾಗಲೇ ನೀಡಿರುವ ಮೂರು ಕೊಠಡಿಗಳನ್ನು ಮುಂದುವರೆಸಲು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕೆ ಕೇಂದ್ರ, ಮೈಸೂರು, ರವರು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಎರಡು (2) ವರ್ಷಗಳ ಅವಧಿಗೆ ಹಾಲಿ ಇರುವ ಕೊಠಡಿಗಳನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿನ ಷರತ್ತಿಗೊಳಪಟ್ಟು ಕಾವಾ ಸಂಸ್ಥೆಗೆ ನೀಡುವ ಸಲುವಾಗಿ ಸರ್ಕಾರಿ ಆದೇಶ ಹೊರಡಿಸುವಂತೆ ಅಪರ ನಿರ್ದೇಶಕರು (ಜಿಕೈಕೇ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು, ರವರು ಕೋರಿರುತ್ತಾರೆ.

ಮೇಲೆ ಓದಲಾದ (3)ರ ಅನಧಿಕೃತ ಟಿಪ್ಪಣಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯೂ ಸಹ ಚಾಮರಾಜೇಂದ್ರ ದೃಶ್ಯ ಕಲಾ ಅಕಾಡೆಮಿ (ಕಾವಾ), ಮೈಸೂರು, ಈ ಸಂಸ್ಥೆಗೆ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಈಗಾಗಲೇ 4.40 ಎಕರೆ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಗಿದ್ದು, ಕಟ್ಟಡ ವಿನ್ಯಾಸ ಹಾಗೂ ಅಂದಾಜು ಪಟ್ಟಿಯನ್ನು ಸಲ್ಲಿಸಲು ಈಗಾಗಲೇ ಕಾವಾ ಸಂಸ್ಥೆಗೆ ನಿರ್ದೇಶನ ನೀಡಲಾಗಿದ್ದು, ಕಟ್ಟಡ ಕಾಮಗಾರಿಯನ್ನು ನಿರ್ಮಿಸಲು ಕಾಲಾವಕಾಶದ ಅಗತ್ಯ ಇರುವುದರಿಂದ ಚಾಮರಾಜೇಂದ್ರ ದೃಶ್ಯ ಕಲಾ ಅಕಾಡೆಮಿಯ ವಿದ್ಯಾರ್ಥಿಗಳ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗಲು ಮೈಸೂರಿನ ಸಿ.ಟಿ.ಐ. ಕಟ್ಟಡದಲ್ಲಿರುವ ಮೂರು ಕೊಠಡಿಗಳನ್ನು ದಿನಾಂಕ : 4–10–2009 ರಿಂದ 5 ವರ್ಷಗಳ ಅವಧಿಗೆ ಅಥವಾ ಸಂಸ್ಥೆಯು ಸ್ವಂತ ಕಟ್ಟಡ ಹೊಂದುವವರೆಗೆ ಉಪಯೋಗಿಸಿಕೊಳ್ಳಲು ಅನುಮತಿ ನೀಡುವಂತೆ ಕೋರಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 18 ಕೈಯೋವಿ 2010, ಬೆಂಗಳೂರು, ದಿನಾಂಕ : 11–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವ್ಯಾಪ್ತಿಯಲ್ಲಿನ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ (ಸಿ.ಟಿ.ಐ.)ಯ ಕಟ್ಟಡದಲ್ಲಿನ ಮೂರು ಕೊಠಡಿಗಳನ್ನು ಈಗಾಗಲೇ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿನ ಷರತ್ತಿಗೊಳಪಟ್ಟು 2 ವರ್ಷಗಳ ಅವಧಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನದಲ್ಲಿರುವ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (ಕಾವಾ) ಸಂಸ್ಥೆಯ ತರಬೇತಿಗಳ ಉಪಯೋಗಕ್ಕಾಗಿ ತಾತ್ಕಾಲಿಕವಾಗಿ ಉಪಯೋಗಿಸಿಕೊಳ್ಳಲು ಸರ್ಕಾರದ ಅನುಮತಿಯನ್ನು ನೀಡಿರುವುದನ್ನು ಮುಂದುವರೆಸಿ, ದಿನಾಂಕ : 4–10–2009 ರಿಂದ 2 ವರ್ಷಗಳ ಅವಧಿಗೆ ಉಪಯೋಗಿಸಿಕೊಳ್ಳಲು ಸರ್ಕಾರದ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್.ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸೇವೆಗಳು)

ಪಿ.ಆರ್. 2812

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಸರ್ಕಾರಿ ಆಸ್ಪತ್ರೆಗಳಲ್ಲಿ ಎಂಬಿಬಿಎಸ್/ಬಿಡಿಎಸ್ ಹಾಗೂ ಇತರೆ ಕೋರ್ಸುಗಳಿಗೆ ಕ್ಲಿನಿಕಲ್ ಸೌಲಭ್ಯ ಪಡೆಯುತ್ತಿರುವ/ಪಡೆಯುವ ಸಂಸ್ಥೆಗಳಿಗೆ ಕ್ಲಿನಿಕಲ್ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ವೈಶಿನಿ/ಎಂಇಪಿ 13/2008–09, ದಿನಾಂಕ : 22–8–2010.

**ಪ್ರಸ್ತಾವನೆ :**

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (1) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ದಿನಾಂಕ 1–8–2009 ರಂದು ಸರ್ಕಾರದ ಆಸ್ಪತ್ರೆಗಳಲ್ಲಿ ಕ್ಲಿನಿಕಲ್ ಸೌಲಭ್ಯವನ್ನು ಪಡೆಯಲು ಕ್ಲಿನಿಕಲ್ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದಂತೆ, ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವೃತ್ತಿಪರ ಕೋರ್ಸುಗಳಿಗೆ ಕ್ಲಿನಿಕಲ್ ಸೌಲಭ್ಯವನ್ನು ಪಡೆಯುತ್ತಿರುವ ಸಂಸ್ಥೆಗಳಿಗೆ ಈ ಕೆಳಗೆ ಸೂಚಿಸಿರುವಂತೆ ಕ್ಲಿನಿಕಲ್ ಶುಲ್ಕವನ್ನು ಪರಿಷ್ಕರಿಸಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಶುಲ್ಕಗಳ ವಿವರ | ಜಾರಿಯಲ್ಲಿರುವ ಶುಲ್ಕದ ದರಗಳು (ರೂ.ಗಳಲ್ಲಿ) | ಪರಿಷ್ಕರಿಸಬೇಕಾದ ಶುಲ್ಕದ ದರಗಳು (ರೂ.ಗಳಲ್ಲಿ) |
|---|---|---|---|
| 1 | ಹೊಸ ವೈದ್ಯಕೀಯ ಕಾಲೇಜಿನ ತನಿಖಾ ಶುಲ್ಕ | 50,000 | 50,000 |
| 2 | ಹೊಸ ದಂತ ಕಾಲೇಜಿನ ತನಿಖಾ ಶುಲ್ಕ | 25,000 | 25,000 |
| 3 | ಸ್ನಾತಕೋತ್ತರ ವ್ಯಾಸಂಗದ ಪ್ರಾರಂಭಕ್ಕಾಗಿ ತನಿಖಾ ಶುಲ್ಕ | ಪ್ರತಿ ವಿಷಯಕ್ಕೆ 10,000 | ಪ್ರತಿ ವಿಷಯಕ್ಕೆ 10,000 |
| 4 | ಸ್ನಾತಕೋತ್ತರ ವೈದ್ಯ/ದಂತ ಸೀಟುಗಳ ಹೆಚ್ಚಳಕ್ಕಾಗಿ ತನಿಖಾ ಶುಲ್ಕ | ಪ್ರತಿ ವಿಷಯಕ್ಕೆ 5,000 | ಪ್ರತಿ ವಿಷಯಕ್ಕೆ 5,000 |
| 5 | ಹೊಸ ನರ್ಸಿಂಗ್ ಶಾಲೆ/ಕಾಲೇಜು ಮತ್ತು ಇತರೆ ಅರೆ ವೈದ್ಯಕೀಯ ಡಿಗ್ರಿ ಮತ್ತು ಡಿಪ್ಲೊಮೊ ಕೋರ್ಸುಗಳ ಪ್ರಾರಂಭ ಶುಲ್ಕ | ಡಿಗ್ರಿ 10,000<br>ಡಿಪ್ಲೊಮೊ 5,000 | ಡಿಗ್ರಿ 25,000<br>ಡಿಪ್ಲೊಮೊ 5,000 |
| 6 | ನರ್ಸಿಂಗ್ ಶಾಲೆ/ಕಾಲೇಜು ಮತ್ತು ಪಿಸಿಯೋಥೆರಪಿ ಮತ್ತು ಇತರೆ ಅರೆ ವೈದ್ಯಕೀಯ ಸೀಟುಗಳನ್ನು ಹೆಚ್ಚಿಸುವುದಕ್ಕಾಗಿ ತನಿಖಾ ಶುಲ್ಕ | ಪ್ರತಿ ಸೀಟು 1,000 | ಪ್ರತಿ ಸೀಟು 5,000 |
| 7 | ಗೃಹ ವೈದ್ಯರು ನಿಗದಿತ ಸಮಯದಲ್ಲಿ ಅನುಮತಿ ಪಡೆಯದಿದ್ದಲ್ಲಿ ಅವರಿಗೆ ವಿಧಿಸುವ ದಂಡ | ಪ್ರತಿ ಅಭ್ಯರ್ಥಿಗೆ 1,000 | ಪ್ರತಿ ಅಭ್ಯರ್ಥಿಗೆ 5,000 |
| 8 | ಗೃಹ ವೈದ್ಯರಿಗೆ ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ವರ್ಗಾವಣೆ ಮಾಡಿದಾಗ ನೀಡುವ ಅನಾಕ್ಷೇಪಣಾ ಪತ್ರ | ಪ್ರತಿ ಅಭ್ಯರ್ಥಿಗೆ 1,000 | ಪ್ರತಿ ಅಭ್ಯರ್ಥಿಗೆ 5,000 |
| 9 | ಗೃಹ ವೈದ್ಯರಿಗೆ ಒಂದು ಕಾಲೇಜಿನಿಂದ ಹೊರದೇಶಕ್ಕೆ ಹೋಗಲು ಹಾಗೂ ಬರಲು ನೀಡುವ ಅನಾಕ್ಷೇಪಣಾ ಪತ್ರ | ಪ್ರತಿ ಅಭ್ಯರ್ಥಿಗೆ 5,000 | ಪ್ರತಿ ಅಭ್ಯರ್ಥಿಗೆ 25,000 |
| 10 | ಅರೆ ವೈದ್ಯಕೀಯ ಹಾಗೂ ಡಿಪ್ಲೊಮಾ ನರ್ಸಿಂಗ್ ಅಭ್ಯರ್ಥಿಗಳಿಗೆ ಒಂದು ಕಾಲೇಜಿನಿಂದ/ಒಂದು ಸಂಸ್ಥೆಯಿಂದ ಮತ್ತೊಂದು ಸಂಸ್ಥೆಗೆ ವರ್ಗಾವಣೆ ಮಾಡಿದಾಗ ನೀಡುವ ಅನಾಕ್ಷೇಪಣಾ ಪತ್ರ | ಪ್ರತಿ ಅಭ್ಯರ್ಥಿಗೆ 1,000 | ಪ್ರತಿ ಅಭ್ಯರ್ಥಿಗೆ 5,000 |

**ಕ್ಲಿನಿಕಲ್ ಶುಲ್ಕದ ಪರಿಷ್ಕೃತ ದರಗಳು**

| ಕ್ರಮ ಸಂಖ್ಯೆ | ಕೋರ್ಸಿನ ವಿವರ | ಜಾರಿಯಲ್ಲಿರುವ ಕ್ಲಿನಿಕಲ್ ಶುಲ್ಕ (ರೂ.ಗಳಲ್ಲಿ) ಪ್ರತಿವರ್ಷ/ಪ್ರತಿ ವಿದ್ಯಾರ್ಥಿಗೆ | ಪರಿಷ್ಕರಿಸಬೇಕಾದ ಕ್ಲಿನಿಕಲ್ ಶುಲ್ಕದ (ರೂ.ಗಳಲ್ಲಿ) ಪ್ರತಿ ವರ್ಷ/ಪ್ರತಿ ವಿದ್ಯಾರ್ಥಿಗೆ |
|---|---|---|---|
| 1 | ಎಂಬಿಬಿಎಸ್ | 9,000 | 32,500 |
| 2 | ಬಿಡಿಎಸ್ | 12,000 | 36,000 |
| 3 | ಸ್ನಾತಕೋತ್ತರ ಕೋರ್ಸುಗಳು<br>1. ಪದವಿ (ಡಿಗ್ರಿ)<br>2. ಡಿಪ್ಲೊಮಾ | <br>25,000<br>25,000 | <br>1,10,000<br>1,30,000 |
| 4 | ಐ.ಎಸ್.ಎಂ.ಹೆಚ್. ಪದವಿ | 1,500 | 3,000 |
| 5 | ನರ್ಸಿಂಗ್ ಡಿಗ್ರಿ ಸರ್ಟಿಫಿಕೇಟ್ ಕೋರ್ಸು | 1,000 | 2,500 |
| 6 | ಡಿಪ್ಲೊಮಾ ಫಾರ್ಮಸಿ | 1,000 | 2,500 |
| 7 | ಫಿಸಿಯೋಥೆರಪಿ<br>1. ಪದವಿ (ಡಿಗ್ರಿ)<br>2. ಡಿಪ್ಲೊಮಾ | <br>3,000<br>1,500 | <br>6,000<br>3,000 |
| 8 | ಟೆಕ್ನೀಷಿಯನ್ ಕೋರ್ಸುಗಳು (ಎಕ್ಸ್ ರೇ, ಲ್ಯಾಬ್, ಓಟಿ, ಇಸಿಜಿ, ಇಇಜಿ, ರೆಫ್ರಾಕ್ಷನಿಸ್ಟ್ ಮತ್ತು ಇತ್ಯಾದಿ) | 1,500 | 3,000 |

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ತಾಂತ್ರಿಕ ಕೋರ್ಸುಗಳನ್ನು ಪ್ರಾರಂಭಿಸಲು ತಾಂತ್ರಿಕ ಅಭಿಪ್ರಾಯ ಪಡೆಯಲು ಇರುವ ತನಿಖಾ ಶುಲ್ಕ ಹಾಗೂ ಸರ್ಕಾರದ ಆಸ್ಪತ್ರೆಗಳಲ್ಲಿ ಎಂಬಿಬಿಎಸ್, ಬಿಡಿಎಸ್ ಹಾಗೂ ಇತರೆ ಕೋರ್ಸುಗಳಿಗೆ ಕ್ಲಿನಿಕಲ್ ಸೌಲಭ್ಯವನ್ನು ಪಡೆಯುತ್ತಿರುವ/ಪಡೆಯುವ ಸಂಸ್ಥೆಗಳಿಗೆ ಕ್ಲಿನಿಕಲ್ ಶುಲ್ಕವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 546 ಎಂಪಿಎಸ್ 2010, ಬೆಂಗಳೂರು, ದಿನಾಂಕ : 11–11–2010**

ತಾಂತ್ರಿಕ ಕೋರ್ಸುಗಳನ್ನು ಪ್ರಾರಂಭಿಸಲು ತಾಂತ್ರಿಕ ಅಭಿಪ್ರಾಯ ಪಡೆಯಲು ಇರುವ ತನಿಖಾ ಶುಲ್ಕ ಹಾಗೂ ಸರ್ಕಾರದ ಆಸ್ಪತ್ರೆಗಳಲ್ಲಿ ಎಂಬಿಬಿಎಸ್, ಬಿಡಿಎಸ್ ಹಾಗೂ ಇತರೆ ಕೋರ್ಸುಗಳಿಗೆ ಕ್ಲಿನಿಕಲ್ ಸೌಲಭ್ಯವನ್ನು ಪಡೆಯುತ್ತಿರುವ/ಪಡೆಯುವ ಸಂಸ್ಥೆಗಳಿಗೆ ಕ್ಲಿನಿಕಲ್ ಶುಲ್ಕವನ್ನು ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ.

| ಕ್ರಮ ಸಂಖ್ಯೆ | ಶುಲ್ಕಗಳ ವಿವರ | ಜಾರಿಯಲ್ಲಿರುವ ಶುಲ್ಕದ ದರಗಳು (ರೂ.ಗಳಲ್ಲಿ) | ಪರಿಷ್ಕರಿಸಬೇಕಾದ ಶುಲ್ಕದ ದರಗಳು (ರೂ.ಗಳಲ್ಲಿ) |
|---|---|---|---|
| 1 | ಹೊಸ ವೈದ್ಯಕೀಯ ಕಾಲೇಜಿನ ತನಿಖಾ ಶುಲ್ಕ | 50,000 | 50,000 |
| 2 | ಹೊಸ ದಂತ ಕಾಲೇಜಿನ ತನಿಖಾ ಶುಲ್ಕ | 25,000 | 25,000 |
| 3 | ಸ್ನಾತಕೋತ್ತರ ವ್ಯಾಸಂಗದ ಪ್ರಾರಂಭಕ್ಕಾಗಿ ತನಿಖಾ ಶುಲ್ಕ | ಪ್ರತಿ ವಿಷಯಕ್ಕೆ 10,000 | ಪ್ರತಿ ವಿಷಯಕ್ಕೆ 10,000 |
| 4 | ಸ್ನಾತಕೋತ್ತರ ವೈದ್ಯ/ದಂತ ಸೀಟುಗಳ ಹೆಚ್ಚಳಕ್ಕಾಗಿ ತನಿಖಾ ಶುಲ್ಕ | ಪ್ರತಿ ವಿಷಯಕ್ಕೆ 5,000 | ಪ್ರತಿ ವಿಷಯಕ್ಕೆ 5,000 |
| 5 | ಹೊಸ ನರ್ಸಿಂಗ್ ಶಾಲೆ/ಕಾಲೇಜು ಮತ್ತು ಇತರೆ ಅರೆ ವೈದ್ಯಕೀಯ ಡಿಗ್ರಿ ಮತ್ತು ಡಿಪ್ಲೊಮೊ ಕೋರ್ಸುಗಳ ಪ್ರಾರಂಭ ಶುಲ್ಕ | ಡಿಗ್ರಿ 10,000<br>ಡಿಪ್ಲೊಮಾ 5,000 | ಡಿಗ್ರಿ 25,000<br>ಡಿಪ್ಲೊಮಾ 10,000 |
| 6 | ನರ್ಸಿಂಗ್ ಶಾಲೆ/ಕಾಲೇಜು ಮತ್ತು ಫಿಸಿಯೋಥೆರಪಿ ಮತ್ತು ಇತರೆ ಅರೆ ವೈದ್ಯಕೀಯ ಸೀಟುಗಳನ್ನು ಹೆಚ್ಚಿಸುವುದಕ್ಕಾಗಿ ತನಿಖಾ ಶುಲ್ಕ | ಪ್ರತಿ ಸೀಟು 1,000 | ಪ್ರತಿ ಸೀಟು 5,000 |
| 7 | ಗೃಹ ವೈದ್ಯರು ನಿಗದಿತ ಸಮಯದಲ್ಲಿ ಅನುಮತಿ ಪಡೆಯದಿದ್ದಲ್ಲಿ ಅವರಿಗೆ ವಿಧಿಸುವ ದಂಡ | ಪ್ರತಿ ಅಭ್ಯರ್ಥಿಗೆ 1,000 | ಪ್ರತಿ ಅಭ್ಯರ್ಥಿಗೆ 5,000 |
| 8 | ಗೃಹ ವೈದ್ಯರಿಗೆ ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ವರ್ಗಾವಣೆ ಮಾಡಿದಾಗ ನೀಡುವ ಅನಾಕ್ಷೇಪಣಾ ಪತ್ರ | ಪ್ರತಿ ಅಭ್ಯರ್ಥಿಗೆ 1,000 | ಪ್ರತಿ ಅಭ್ಯರ್ಥಿಗೆ 5,000 |
| 9 | ಗೃಹ ವೈದ್ಯರಿಗೆ ಒಂದು ಕಾಲೇಜಿನಿಂದ ಹೊರದೇಶಕ್ಕೆ ಹೋಗಲು ಹಾಗೂ ಬರಲು ನೀಡುವ ಅನಾಕ್ಷೇಪಣಾ ಪತ್ರ | ಪ್ರತಿ ಅಭ್ಯರ್ಥಿಗೆ 5,000 | ಪ್ರತಿ ಅಭ್ಯರ್ಥಿಗೆ 25,000 |
| 10 | ಅರೆ ವೈದ್ಯಕೀಯ ಹಾಗೂ ಡಿಪ್ಲೊಮಾ ನರ್ಸಿಂಗ್ ಅಭ್ಯರ್ಥಿಗಳಿಗೆ ಒಂದು ಕಾಲೇಜಿನಿಂದ/ಒಂದು ಸಂಸ್ಥೆಯಿಂದ ಮತ್ತೊಂದು ಸಂಸ್ಥೆಗೆ ವರ್ಗಾವಣೆ ಮಾಡಿದಾಗ ನೀಡುವ ಅನಾಕ್ಷೇಪಣಾ ಪತ್ರ | ಪ್ರತಿ ಅಭ್ಯರ್ಥಿಗೆ 1,000 | ಪ್ರತಿ ಅಭ್ಯರ್ಥಿಗೆ 5,000 |

**ಕ್ಲಿನಿಕಲ್ ಶುಲ್ಕದ ಪರಿಷ್ಕೃತ ದರಗಳು**

| ಕ್ರಮ ಸಂಖ್ಯೆ | ಕೋರ್ಸಿನ ವಿವರ | ಜಾರಿಯಲ್ಲಿರುವ ಕ್ಲಿನಿಕಲ್ ಶುಲ್ಕ (ರೂ.ಗಳಲ್ಲಿ) ಪ್ರತಿವರ್ಷ/ಪ್ರತಿ ವಿದ್ಯಾರ್ಥಿಗೆ | ಪರಿಷ್ಕರಿಸಬೇಕಾದ ಕ್ಲಿನಿಕಲ್ ಶುಲ್ಕದ (ರೂ.ಗಳಲ್ಲಿ) ಪ್ರತಿ ವರ್ಷ/ಪ್ರತಿ ವಿದ್ಯಾರ್ಥಿಗೆ |
|---|---|---|---|
| 1 | ಎಂಬಿಬಿಎಸ್ | 9,000 | 32,500 |
| 2 | ಬಿಡಿಎಸ್ | 12,000 | 36,000 |
| 3 | ಸ್ನಾತಕೋತ್ತರ ಕೋರ್ಸುಗಳು<br>1. ಪದವಿ (ಡಿಗ್ರಿ)<br>2. ಡಿಪ್ಲೊಮಾ | <br>25,000<br>25,000 | <br>1,10,000<br>1,30,000 |
| 4 | ಐ.ಎಸ್.ಎಂ.ಹೆಚ್. ಪದವಿ | 1,500 | 3,000 |
| 5 | ನರ್ಸಿಂಗ್ ಡಿಗ್ರಿ ಸರ್ಟಿಫಿಕೇಟ್ ಕೋರ್ಸು | 1,000 | 2,500 |
| 6 | ಡಿಪ್ಲೊಮಾ ಫಾರ್ಮಸಿ | 1,000 | 2,500 |
| 7 | ಫಿಸಿಯೋಥೆರಪಿ<br>1. ಪದವಿ (ಡಿಗ್ರಿ)<br>2. ಡಿಪ್ಲೊಮಾ | <br>3,000<br>1,500 | <br>6,000<br>3,000 |
| 8 | ಟೆಕ್ನೀಷಿಯನ್ ಕೋರ್ಸುಗಳು (ಎಕ್ಸ್ ರೇ, ಲ್ಯಾಬ್, ಓಟಿ, ಇಸಿಜಿ, ಇಇಜಿ, ರೆಫ್ರಾಕ್ಷನಿಸ್ಟ್ ಮತ್ತು ಇತ್ಯಾದಿ) | 1,500 | 3,000 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಬಿ. ಧನಂಜಯಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

(ವೈದ್ಯಕೀಯ ಶಿಕ್ಷಣ)

ಪಿ. ಆರ್. 2813

## ಕಂದಾಯ ಸಚಿವಾಲಯ

**ವಿಷಯ :** ಕಾವೇರಿ ಯೋಜನೆಯ ಉಸ್ತುವಾರಿ ಘಟಕ ( KAVERI PROJJECT MONITORING UNIT) ಸ್ಥಾಪನೆ ಕುರಿತು.

**ಉಲ್ಲೇಖ :** 1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ : COMP/47/2003-04, ದಿನಾಂಕ : 1–2–2007 ರಿಂದ ದಿನಾಂಕ : 22–6–2010 ರವರಿಗೆ ಕೊನೆಗೊಂಡ ಪತ್ರ ವ್ಯವಹಾರ

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರಗಳಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕ ಆಯುಕ್ತರವರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯು 'ಕಾವೇರಿ ಯೋಜನೆ' ಯ ಮೂಲಕ ಎಲ್ಲಾ 242 ಉಪ–ನೋಂದಣಿ ಕಛೇರಿ ಹಾಗೂ 34 ಜಿಲ್ಲಾ ನೋಂದಣಿ ಕಛೇರಿಗಳ ಕಾರ್ಯಚಟುವಟಿಕೆಗಳನ್ನು ಹಾಗೂ ಸೇವೆಗಳನ್ನು 2003–04ನೇ ಸಾಲಿನಿಂದ ಗಣಕೀಕರಣಕ್ಕೊಳಪಡಿಸಿರುವ ಬಗ್ಗೆ ತಿಳಿಸುತ್ತಾ ಗಣಕೀಕರಣ ಯೋಜನೆಗಳನ್ನು ಸಮರ್ಪಕವಾಗಿ ಹಾಗೂ ಸುವ್ಯವಸ್ಥಿತವಾಗಿ ಮುನ್ನೆಡೆಸಿಕೊಂಡು ಹೋಗಲು 'ಕಾವೇರಿ ಯೋಜನೆ ಉಸ್ತುವಾರಿ ಘಟಕ' ಮಂಜೂರು ಮಾಡಲು ಕೋರಿರುತ್ತಾರೆ.

ಕಾವೇರಿ ಗಣಕೀಕರಣ ಯೋಜನೆಯನ್ನು BOT ಆಧಾರದನ್ವಯ ಮೆ॥ Electronic Corporation of India, ಮೆ॥ CMS ಕಂಪ್ಯೂಟರ್ಸ್ ಪ್ರೈ.ಲಿ ಸಂಸ್ಥೆಗಳು ಹಾಗೂ ಕಾವೇರಿ ತಂತ್ರಾಂಶದ ನಿರ್ವಹಣೆಯನ್ನು ಮೆ॥ C-DAC ಪುಣೆ ಸಂಸ್ಥೆಯು ನಿರ್ವಹಿಸುತ್ತಿದೆ. ಕಾವೇರಿ ಗಣಕೀಕರಣ ಯೋಜನೆಯ ಅಡಿಯಲ್ಲಿ ಇಲಾಖೆಯು ನೀಡುತ್ತಿರುವ ಸೇವೆಗಳ ವಿವರಗಳು ಈ ಕೆಳಕಂಡಂತಿರುತ್ತವೆ :–

1. ದಸ್ತಾವೇಜುಗಳ ನೋಂದಣಿ
2. ಪಾಲುದಾರಿಕೆ ಸಂಸ್ಥೆಗಳ ನೋಂದಣಿ
3. ವಿವಾಹ ನೋಂದಣಿ (ಹಿಂದೂ ವಿವಾಹ ಹಾಗೂ ವಿಶೇಷ ವಿವಾಹ)
4. ಋಣಭಾರ ಪ್ರಮಾಣ ಪತ್ರ ನೀಡಿಕೆ
5. ದಸ್ತಾವೇಜುಗಳ ದೃಢೀಕೃತ ನಕಲು ಪ್ರತಿ ನೀಡಿಕೆ
6. ವಿವಾಹ ಪ್ರಮಾಣ ಪತ್ರಗಳ ನೀಡಿಕೆ.
7. ಪಾಲುದಾರಿಕೆ ಸಂಸ್ಥೆಗಳ ದಾಖಲೆಗಳ ಪ್ರತಿ ನೀಡಿಕೆ–ಇತ್ಯಾದಿ.

ಇದಲ್ಲದೆ ಕಾವೇರಿ–ಭೂಮಿ ತಂತ್ರಾಂಶಗಳನ್ನು 2006ನೇ ಸಾಲಿನಿಂದ ಜೋಡಣೆ ಮಾಡಲಾಗಿರುತ್ತದೆ. ಇದರನ್ವಯ ಕೃಷಿ ಜಮೀನುಗಳ ನೋಂದಣಿ ದಸ್ತಾವೇಜುಗಳಿಗೆ ಸಂಬಂಧಿಸಿದ ಜೆ–ಫಾರ್ಮುಗಳನ್ನು XML ಕಡತಗಳ ಮೂಲಕ ವಿದ್ಯುನ್ಮಾನ ದ್ವಾರಾ ಕಾವೇರಿಯಿಂದ ಭೂಮಿಗೆ ಪ್ರತಿ ನಿತ್ಯ ರವಾನಿಸಲಾಗುತ್ತಿದೆ. ಸಾರ್ವಜನಿಕರಿಗೆ ಹೆಚ್ಚಿನ ಸೇವೆಯನ್ನು ನೀಡುವ ಉದ್ದೇಶದಿಂದ ಕಾವೇರಿ ಗಣಕೀಕರಣ ಯೋಜನೆಯೊಂದಿಗೆ ಇಲಾಖೆಯು ಹಮ್ಮಿಕೊಂಡಿರುವ ಇತರೆ ಗಣಕೀಕರಣ ಯೋಜನೆಗಳ ವಿವರಗಳು ಈ ಕೆಳಕಂಡಂತಿರುತ್ತವೆ :–

1. ನೂತನ ವೆಬ್ ಆಧಾರಿತ ಗಣಕೀಕರಣ ಯೋಜನೆ
2. 2003–04ನೇ ಸಾಲಿಗಿಂತ ಹಿಂದಿನ ಋಣಭಾರ ಪ್ರಮಾಣ ಪತ್ರ ನೀಡಿಕೆ ಸಂಬಂಧ (ಇಂಡೆಕ್ಸ್–II ವಹಿಗಳ) ಡಾಟಾ ಎಂಟ್ರಿ ಯೋಜನೆ.
3. 2003–04ನೇ ಸಾಲಿಗಿಂತ ಹಿಂದಿನ ಸಾಲಿನಲ್ಲಿ ನೋಂದಾಯಿಸಿರುವ ದಸ್ತಾವೇಜುಗಳ ಸ್ಕ್ಯಾನಿಂಗ್ ಮತ್ತು ಮೈಕ್ರೋಫಿಲ್ಮಿಂಗ್ ಯೋಜನೆ
4. ಬೆಂಗಳೂರು–1 ಕೇಂದ್ರಗಳ ಮೂಲಕ ಋಣಭಾರ ಪ್ರಮಾಣ ಪತ್ರ, ದಸ್ತಾವೇಜುಗಳ ಹಾಗೂ ವಿವಾಹ ಪ್ರಮಾಣ ಪತ್ರಗಳ ದೃಢೀಕರಣ ನಕಲು ಪ್ರತಿ ನೀಡಿಕೆ ಯೋಜನೆ
5. ಇ–ಸ್ಟಾಂಪಿಂಗ್ ಯೋಜನೆ
6. ಇಲಾಖೆಯ ಎಲ್ಲಾ ಕಛೇರಿಗಳಿಗೆ KSWAN ಸಂಪರ್ಕ ನೀಡಿಕೆ ಹಾಗೂ ನಿರ್ವಹಣೆ

ಪ್ರಸ್ತುತ ಜಾರಿಯಲ್ಲಿರುವ ಕಾವೇರಿ ಯೋಜನೆ ಸೇರಿದಂತೆ ಮೇಲ್ಕಂಡ ಎಲ್ಲಾ ಯೋಜನೆಗಳನ್ನು ಸಮರ್ಪಕವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸಿಕೊಂಡು ಹೋಗಲು ಇಲಾಖೆಯಲ್ಲಿ ತಾಂತ್ರಿಕ ಪರಿಣಿತರು ಇಲ್ಲದಿರುವುದರಿಂದ ತಾಂತ್ರಿಕ ಪರಿಣಿತರನ್ನೊಳಗೊಂಡ ಕಾವೇರಿ ಯೋಜನೆ ಉಸ್ತುವಾರಿ ಘಟಕ (KAVERI Project Monitoring Unit) ಸ್ಥಾಪಿಸುವುದು ಅತ್ಯವಶ್ಯವಿದೆ.

ಕಾವೇರಿ ಯೋಜನೆ ಉಸ್ತುವಾರಿ ಘಟಕದಲ್ಲಿ ಇರಬೇಕಾದ ಅಧಿಕಾರಿ/ಸಿಬ್ಬಂದಿ ತಾಂತ್ರಿಕ ಸದಸ್ಯರ ವಿವರಣೆ ಈ ಕೆಳಕಂಡಂತೆ ನೀಡಲಾಗಿರುತ್ತದೆ :–

1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕ ಆಯುಕ್ತರವರು– ಚೇರ್‌ಮನ್
2. ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಗಣಕೀಕರಣ) – ಯೋಜನಾ ನಿರ್ದೇಶಕರು (Project Director)
3. ಪ್ರೋಗ್ರಾಮ್ ಮ್ಯಾನೇಜರ್–1 (ಶಾಶ್ವತ ಹುದ್ದೆ–ಕೇಂದ್ರ ಸ್ಥಾನ ಸಹಾಯಕರು–ಹೊಸ ಹುದ್ದೆ–ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಗ್ರೂಪ್–ಎ ವೇತನ ಶ್ರೇಣಿ ರೂ. 14050–25050.
4. ಸಹಾಯಕ ಪ್ರೋಗ್ರಾಮ್ ಮ್ಯಾನೇಜರ್–1 (ಶಾಶ್ವತ ಹುದ್ದೆ–ಹಿರಿಯ ಉಪ–ನೋಂದಣಾಧಿಕಾರಿ–ಹೊಸ ಹುದ್ದೆ–(ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಅನ್ವಯ) ಗ್ರೂಪ್–ಬಿ ವೇತನ ಶ್ರೇಣಿ ರೂ. 11400–21600.
5. ಬೆರಳಚ್ಚುಗಾರರು ಮತ್ತು ಡಾಟಾ ಎಂಟ್ರಿ ಆಪರೇಟರ್–1(ಶಾಶ್ವತ ಹುದ್ದೆ) (ಹೊಸ ಹುದ್ದೆ) (ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಅನ್ವಯ) ಗ್ರೂಪ್–ಸಿ ವೇತನ ಶ್ರೇಣಿ ರೂ. 5800–10500
6. ಯೋಜನಾ ನಿರ್ವಾಹಕರು (ಓ ಮತ್ತು ಎಮ್) 1–ತಾಂತ್ರಿಕ ಸದಸ್ಯರು (ಹೊರ ಗುತ್ತಿಗೆಯಿಂದ ನೇಮಕ ಮಾಡಿಕೊಳ್ಳುವುದು).
7. Project Manager (New IT Initiatives) -1 ತಾಂತ್ರಿಕ ಸದಸ್ಯರು (ಹೊರ ಗುತ್ತಿಗೆಯಿಂದ ನೇಮಕ ಮಾಡಿಕೊಳ್ಳುವುದು)
8. ತಾಂತ್ರಿಕ ಸಲಹೆಗಾರರು (Technical Consultants) –2 ತಾಂತ್ರಿಕ ಸದಸ್ಯರು (ಹೊರಗುತ್ತಿಗೆಯಿಂದ ನೇಮಕ ಮಾಡಿಕೊಳ್ಳುವುದು)
9. ಡಾಟಾ ಬೇಸ್ ಅಡ್ಮಿನಿಸ್ಟ್ರೇಟರ್–1 ತಾಂತ್ರಿಕ ಸದಸ್ಯರು (ಹೊರಗುತ್ತಿಗೆಯಿಂದ ನೇಮಕ ಮಾಡಿಕೊಳ್ಳುವುದು)

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಗಣಕೀಕರಣ ಯೋಜನೆಗಳನ್ನು ಸಮರ್ಪಕವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸಿಕೊಂಡು ಹೋಗುವುದಕ್ಕಾಗಿ ಕಾವೇರಿ ಯೋಜನೆ ಉಸ್ತುವಾರಿ ಘಟಕ (KAVERI Project Monitoring Unit) ಸ್ಥಾಪಿಸುವುದು ಅತ್ಯವಶ್ಯವಿರುವುದೆಂದು ಮನಗಂಡು ಸದರಿ ಘಟಕ ಸ್ಥಾಪನೆ ಕುರಿತು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 292 ಮುನೋಮು 2008 (ಭಾ), ಬೆಂಗಳೂರು, ದಿನಾಂಕ : 25–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗಣಕೀಕರಣ ಯೋಜನೆಗಳ ಸಮರ್ಪಕ ಹಾಗೂ ಸುವ್ಯವಸ್ಥಿತ ನಿರ್ವಹಣೆ ಹಾಗೂ ಉಸ್ತುವಾರಿಗಾಗಿ ಕೆಳಕಂಡಂತೆ ಕಾವೇರಿ ಯೋಜನೆ ಉಸ್ತುವಾರಿ ಘಟಕವನ್ನು (KAVERI Project Monitoring Unit) ಸ್ಥಾಪಿಸಲು ಸರ್ಕಾರವು ಅನುಮೋದನೆ ನೀಡಿದೆ. ಈ ಸಂಬಂಧ ಕೆಳಕಾಣಿಸಿದ ಹುದ್ದೆಗಳನ್ನು ಸೃಜಿಸಲು ಸಹ ಅನುಮೋದನೆ ನೀಡಿದೆ.

ಇಲಾಖಾ ಅಧಿಕಾರಿಗಳು

| ಕ್ರ.ಸಂ. | ಹುದ್ದೆ/ಹೆಸರು | ಸಂಖ್ಯೆ | ವೇತನ ಶ್ರೇಣಿ | ನೇಮಕಾತಿ ವಿಧಾನ | ಹುದ್ದೆಯ ಸ್ವರೂಪ |
|---|---|---|---|---|---|
| 1 | ಪ್ರೋಗ್ರಾಮ್ ಮ್ಯಾನೇಜರ್–ಕೇಂದ್ರ ಸ್ಥಾನ ಸಹಾಯಕರು ಗ್ರೂಪ್–ಎ | 1 | ರೂ. 14050–25050 | ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ | ಶಾಶ್ವತ |
| 2 | ಸಹಾಯಕ ಪ್ರೋಗ್ರಾಮ ಮ್ಯಾನೇಜರ್–ಹಿರಿಯ ಉಪ–ನೋಂದಣಾಧಿಕಾರಿ ಗ್ರೂಪ್–ಬಿ | 1 | ರೂ. 11400–21600 | ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ | ಶಾಶ್ವತ |
| 3 | Typist CUM/Data Entry-Operator Group-C | 1 | ರೂ. 5800–10500 | ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ | ಶಾಶ್ವತ |

ತಾಂತ್ರಿಕ ಸದಸ್ಯರು

| ಕ್ರ.ಸಂ. | ಹುದ್ದೆ ಹೆಸರು | ಸಂಖ್ಯೆ | ವೇತನ / ಸಂಭಾವನೆ | ನೇಮಕಾತಿ ವಿಧಾನ | ಹುದ್ದೆಯ ಸ್ವರೂಪ |
|---|---|---|---|---|---|
| 1 | Project Manager (O & M) | 1 | ಇ–ಆಡಳಿತ ಇಲಾಖೆಯ ದರಗಳ ಆಧಾರದ ಮೇಲೆ ನಿರ್ಧಾರ | ಹೊರಗುತ್ತಿಗೆ ಆಧಾರದನ್ವಯ | ಶಾಶ್ವತ |
| 2 | Project Manager (New IT Initiatives) | 1 | ಇ–ಆಡಳಿತ ಇಲಾಖೆಯ ದರಗಳ ಆಧಾರದ ಮೇಲೆ ನಿರ್ಧಾರ | ಹೊರಗುತ್ತಿಗೆ ಆಧಾರದನ್ವಯ | ಶಾಶ್ವತ |
| 3 | Technical Consultant | 2 | ಇ–ಆಡಳಿತ ಇಲಾಖೆಯ ದರಗಳ ಆಧಾರದ ಮೇಲೆ ನಿರ್ಧಾರ | ಹೊರಗುತ್ತಿಗೆ ಆಧಾರದನ್ವಯ | ಶಾಶ್ವತ |
| 4 | Data base Consultant | 1 | ಇ–ಆಡಳಿತ ಇಲಾಖೆಯ ದರಗಳ ಆಧಾರದ ಮೇಲೆ ನಿರ್ಧಾರ | ಹೊರಗುತ್ತಿಗೆ ಆಧಾರದನ್ವಯ | ಶಾಶ್ವತ |

ಹೊರ ಗುತ್ತಿಗೆ ಮೂಲಕ ಭರ್ತಿ ಮಾಡಬೇಕಾದ ಹುದ್ದೆಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ನಿಯಮಾವಳಿ ಪಾಲಿಸಿ ಭರ್ತಿಮಾಡಲು ಕ್ರಮವಹಿಸಬೇಕು. ಸದರಿ ಹುದ್ದೆಗಳಿಗೆ ಸಂಭಾವನೆ ನಿಗಧಿಪಡಿಸುವಾಗ ಇ–ಆಡಳಿತ ಇಲಾಖೆಯ ದರಗಳನ್ನು ಆಧಾರವಾಗಿಟ್ಟುಕೊಂಡು ನಿರ್ಧರಿಸಬೇಕು.

ಕಾವೇರಿ ಯೋಜನೆಯ ಉಸ್ತುವಾರಿ ಘಟಕಕ್ಕೆ ಸಂಬಂಧಿಸಿದ ವೆಚ್ಚವನ್ನು 2030–03–001–2–04 Charges of Supply of registered documents-051 General Expenses ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಭರಿಸಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 480 Exp-7/2010, ದಿನಾಂಕ : 1–9–2010 ರನ್ವಯ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ನೋಂದಣಿ ಮತ್ತು ಮುದ್ರಾಂಕ)

ಪಿ. ಆರ್. 2814

## ಕಾಲೇಜು ಶಿಕ್ಷಣ ಇಲಾಖೆ (ಅನುಬಂಧ-2)

### ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪದವಿ ಕೋರ್ಸ್‌ಗಳೊಂದಿಗೆ ಸ್ನಾತಕೋತ್ತರ ಪದವಿ ಕೋರ್ಸ್‌ಗಳಿರುವ ಕಾಲೇಜುಗಳ ಪಟ್ಟಿ

| ಕ್ರಮ ಸಂಖ್ಯೆ | ಕಾಲೇಜು |
|---|---|
| 1 | ಸರ್ಕಾರಿ ಕಲಾ ಕಾಲೇಜು, ಬೆಂಗಳೂರು |
| 2 | ಸರ್ಕಾರಿ ವಿಜ್ಞಾನ ಕಾಲೇಜು, ಬೆಂಗಳೂರು |
| 3 | ಮಹಾರಾಣಿ ಮಹಿಳಾ ಕಲಾ ಕಾಲೇಜು, ಬೆಂಗಳೂರು |
| 4 | ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಬೆಂಗಳೂರು |
| 5 | ವಿಹೆಚ್ ಡಿ ಗೃಹ ವಿಜ್ಞಾನ ಕಾಲೇಜು, ಬೆಂಗಳೂರು |
| 6 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ, ಬೆಂಗಳೂರು |
| 7 | ಆರ್. ಸಿ. ಕಾಲೇಜು, ಬೆಂಗಳೂರು |
| 8 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ. ಆರ್. ಪುರಂ, ಬೆಂಗಳೂರು |
| 9 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು |
| 10 | ಸರ್ಕಾರಿ ಮಹಿಳಾ ಕಾಲೇಜು, ಕೋಲಾರ |
| 11 | ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು |
| 12 | ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸುರು |
| 13 | ಸರ್ಕಾರಿ ಬಾಲಕರ ಕಾಲೇಜು, ಮಂಡ್ಯ |
| 14 | ಸರ್ಕಾರಿ ಮಹಿಳಾ ಕಾಲೇಜು, ಮಂಡ್ಯ |
| 15 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ. ಆರ್. ಪೇಟೆ |
| 16 | ಸರ್ಕಾರಿ ಕಲಾ ಕಾಲೇಜು, ಹಾಸನ |
| 17 | ಸರ್ಕಾರಿ ಕಾಲೇಜು, ಗುಲ್ಬರ್ಗಾ |
| 18 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಳ್ಳಾರಿ |
| 19 | ಸರ್ಕಾರಿ ಮಹಿಳಾ ಕಾಲೇಜು, ಸಾಗರ, ಶಿವಮೊಗ್ಗ |
| 20 | ಐಡಿಸ್‌ಜಿ ಚಿಕ್ಕಮಗಳೂರು |
| 21 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ದಾವಣಗೆರೆ |
| 22 | ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ |
| 23 | ಸರ್ಕಾರಿ ವಿಜ್ಞಾನ ಕಾಲೇಜು, ಚಿತ್ರದುರ್ಗ |
| 24 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ |
| 25 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚನ್ನಗಿರಿ |
| 26 | ಸರ್. ಎಂ. ವಿಜ್ಞಾನ ಕಾಲೇಜು, ಭದ್ರಾವತಿ |
| 27 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಳ್ಳಕೆರೆ |
| 28 | ಸರ್ಕಾರಿ ವಿಜ್ಞಾನ ಕಾಲೇಜು, ಹಾಸನ (ಗ್ರೇಡ್-1 ಕಾಲೇಜು) |
| 29 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಡೂರು |
| 30 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೊರಟಗೆರೆ |
| 31 | ಸರ್ಕಾರಿ ಕಾಲೇಜು, ಕಾರವಾರ |
| 32 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಿದರ್ |
| 33 | ಸರ್ಕಾರಿ ಮಹಿಳಾ ಕಾಲೇಜು, ಉಡುಪಿ |
| 34 | ಸರ್ ಎಂ. ವಿ. ಕಲಾ ಮತ್ತು ವಾಣಿಜ್ಯ ಕಾಲೇಜು, ಭದ್ರಾವತಿ |
| 35 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾರಕೂರು (ಪ್ರಾಂಶುಪಾಲರು ಹುದ್ದೆ ಮಂಜೂರಾಗಿರುವುದಿಲ್ಲ) |

ಪಿ.ಆರ್ 2940

**ಕಾಲೇಜು ಶಿಕ್ಷಣ ನಿರ್ದೇಶಕರು**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಎನ್. ನಂಜಪ್ಪ, ಮಾಜಿ ರೇಷ್ಮೆ ಪ್ರವರ್ತಕರು ಇವರನ್ನು ಮರು ನೇಮಕ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ :**

1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಜ್ಞಾಪನ ಸಂಖ್ಯೆ : Est/Apt/CR/177/19/79-80, ದಿನಾಂಕ : 1–1–1980.
2. ಸರ್ಕಾರದ ಆದೇಶ ಸಂಖ್ಯೆ : ವಾಕೈ 457 ರೇಸೇವಿ 2000, ದಿನಾಂಕ : 1–2–2003.
3. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ : 4396/2003 ರಲ್ಲಿ ನೀಡಿರುವ ತೀರ್ಪು ದಿನಾಂಕ : 24–07–2009.
4. ಮಾನ್ಯ ಉಚ್ಚ ನ್ಯಾಯಾಲಯದ ಮೇಲ್ಮನವಿ ಸಂಖ್ಯೆ : 24033/10 ರಲ್ಲಿ ನೀಡಿರುವ ತೀರ್ಪು ದಿನಾಂಕ : 13–08–2010.
5. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ : ಸಿಬ್ಬಂದಿ 1(7)/ರೇಪ್ರ/ಪಪೂಅ/2000–01, ದಿನಾಂಕ : 17–08–2010.

**ಪ್ರಸ್ತಾವನೆ:**

ಶ್ರೀ ನಂಜಪ್ಪ, ಮಾಜಿ ರೇಷ್ಮೆ ಪ್ರವರ್ತಕರು (ಸೇವೆಯಿಂದ ತೆಗೆದು ಹಾಕಲ್ಪಟ್ಟ ನೌಕರರು) ಇವರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಜ್ಞಾಪನದಂತೆ ರೇಷ್ಮೆ ಪ್ರವರ್ತಕರಾಗಿ ವೇತನ ಶ್ರೇಣಿ ರೂ. 300–700 ದಿನಾಂಕ : 25–1–1980 ರಂದು ಪೂರ್ವಾಹ್ನ ಕೋಲಾರ ವಲಯದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ನಿಯಮಾನುಸಾರ ಸದರಿ ನೌಕರರು ಅಕೌಂಟ್ಸ್ ಲೋಯರ್ ಪರೀಕ್ಷೆಯಲ್ಲಿ ಸೇವೆಗೆ ಸೇರಿದ 2 ವರ್ಷಗಳ ಒಳಗೆ ಉತ್ತೀರ್ಣರಾಗಬೇಕಾಗಿರುತ್ತದೆ. ಆದರೆ, ಸದರಿ ನೌಕರರು ಮೇಲ್ಕಂಡ ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ಕಾರಣ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಅವರನ್ನು ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿರುತ್ತದೆ. ಮೇಲ್ಕಂಡ ನೌಕರರು ಈ ಆದೇಶವನ್ನು ಪ್ರಶ್ನಿಸಿ ಗೌರವಾನ್ವಿತ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ : 4396/2003ನ್ನು ದಾಖಲಿಸಿದ್ದು ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಮೇಲ್ಕಂಡ ನೌಕರರಿಗೆ ಇಲಾಖಾ ಪರೀಕ್ಷೆಗಳನ್ನು 2 ವರ್ಷಗಳೊಳಗೆ ಪಾಸು ಮಾಡಿಕೊಳ್ಳುವ ಷರತ್ತಿಗೊಳಪಟ್ಟು ಮರುನೇಮಕ ಮಾಡಿಕೊಳ್ಳುವಂತೆ ಆದೇಶಿಸಿರುತ್ತದೆ. ಇದನ್ನು ಪ್ರಶ್ನಿಸಿ ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದ್ದ ಮೇಲೆ ಓದಲಾದ (4)ರ ಮೇಲ್ಮನವಿಯನ್ನು ಮಾನ್ಯರು ಉಚ್ಚ ನ್ಯಾಯಾಲಯವು ವಜಾಗೊಳಿಸಿ ತೀರ್ಪು ನೀಡಿರುತ್ತದೆ.

ಅದರಂತೆ ಮೇಲೆ ಓದಲಾದ (5)ರಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲ್ಕಂಡ ನೌಕರರನ್ನು ಮರುನೇಮಕ ಮಾಡಿಕೊಳ್ಳಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ವಿಷಯವನ್ನು ಪರಿಶೀಲಿಸಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಂತೆ ನೌಕರರನ್ನು ಮರು ನೇಮಕ ಮಾಡಿಕೊಳ್ಳಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 56 ರೇಇವಿ 2010 ಬೆಂಗಳೂರು, ದಿನಾಂಕ: 04ನೇ ನವೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಿಟ್ ಅರ್ಜಿ ಸಂಖ್ಯೆ : 24033/2010 (S-KAT) ದಿನಾಂಕ : 13–08–2010 ರಲ್ಲಿನ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದನ್ವಯ ಶ್ರೀ ಎನ್. ನಂಜಪ್ಪ, ಮಾಜಿ ರೇಷ್ಮೆ ಪ್ರವರ್ತಕರು ಇವರು 2 ವರ್ಷಗಳಲ್ಲಿ ಬಾಕಿ ಇರುವ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಳ್ಳಬೇಕು. ಇಲ್ಲವಾದಲ್ಲಿ ಇವರನ್ನು ಪರಿವೀಕ್ಷಣಾ ಅವಧಿಯಲ್ಲಿರುವ ನೌಕರರೆಂದು ಸೇವೆಯಿಂದ ವಜಾಗೊಳಿಸಲಾಗುವುದು ಎಂಬ ಷರತ್ತಿಗೊಳಪಟ್ಟು ಈ ಕೂಡಲೇ ಜಾರಿಗೆ ಬರುವಂತೆ ರೇಷ್ಮೆ ಪ್ರವರ್ತಕರ ಹುದ್ದೆಗೆ ಮರು ನೇಮಕ ಮಾಡಲಾಗಿದೆ. ಸದರಿ ನೌಕರರು ಯಾವುದೇ ವೇತನ ಬಾಕಿ ಪಾವತಿಗೆ ಅರ್ಹರಿರುವುದಿಲ್ಲ.

ಇವರಿಗೆ ಇಲಾಖಾ ಪರೀಕ್ಷೆ ಪಾಸು ಮಾಡಿಕೊಳ್ಳಲು ಪರೀಕ್ಷೆ ಬರೆಯುವುದಕ್ಕೆ ಅಂಗವಿಕಲತೆ ಇದ್ದಲ್ಲಿ ಪರೀಕ್ಷೆ ಬರೆಯಲು ನೀಡಬಹುದಾದ ಅಗತ್ಯ ಸೌಲಭ್ಯಗಳನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ(ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 2822

## ವಸತಿ ಸಚಿವಾಲಯ

**ವಿಷಯ :** ಕ್ರಯ ಪರಿಣಾಮಕಾರಿ ಮತ್ತು ಪರಿಸರಪ್ರೇಮಿ ತಾಂತ್ರಿಕತೆಯನ್ನು ಅಳವಡಿಸಿಕೊಂಡು ಕೈಗೊಳ್ಳುವ ಕಾಮಗಾರಿಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆಯಿಂದ ನೀಡುವ ವಿನಾಯಿತಿ ಅವಧಿಯನ್ನು 2010–11ನೇ ಸಾಲಿಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಇ/311/ವೆಚ್ಚ–12/10, ದಿನಾಂಕ : 29–04–2010.
2. ಸರ್ಕಾರದ ಪತ್ರ ಸಂಖ್ಯೆ : ವಇ 208 ಹೆಚ್ಎಂ 2009, ದಿನಾಂಕ : 09–09–2010.
3. ಚಿತ್ರದುರ್ಗ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ : ಆಶಾ/ಸಿಆರ್/275/20–11, ದಿನಾಂಕ : 22–09–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ನೇರವಾಗಿ ರಾಜ್ಯದಲ್ಲಿನ ನಿರ್ಮಿತಿ ಕೇಂದ್ರಗಳು ಹಾಗೂ ಕಾರ್ನಿಕ ಸಂಸ್ಥೆಗೆ ವಹಿಸಿಕೊಡುವ ಸರ್ಕಾರದ ವಿವಿಧ ಇಲಾಖೆಯ ಕಾಮಗಾರಿಗಳಲ್ಲಿ ಪರಿಸರ ಪ್ರೇಮಿ ಅಥವಾ ಕ್ರಯ ಪರಿಣಾಮಕಾರಿ ತಂತ್ರಜ್ಞಾನ ಅಥವಾ ನವೀನ ಕಟ್ಟಡ ನಿರ್ಮಾಣ ಸಾಮಗ್ರಿಗಳು ಅಥವಾ ಮೊದಲೇ ಅಚ್ಚು ಹಾಕಿದ ತಂತ್ರಜ್ಞಾನ ಅಳವಡಿಸಿದಲ್ಲಿ ಅಂಥ ಕಾಮಗಾರಿಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ವಸತಿ ಇಲಾಖೆಗೆ 2010–11ನೇ ಸಾಲಿಗೆ ವಿನಾಯಿತಿ ನೀಡಿದೆ. ಅದರಂತೆ ಕರ್ನಾಟಕ ಸಾರ್ವಜನಿಕ ಸಂಗ್ರಹಗಳಲ್ಲಿ ಪಾರದರ್ಶಕತೆ ವಿನಾಯಿತಿ

ಪಡೆಯುವ ನಿರ್ಮಿತಿ ಕೇಂದ್ರಗಳು ಅಥವಾ ಕಾರ್ನಿಕ್ ಸಂಸ್ಥೆ ಇಂತಹ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸಿ ವಿನಾಯಿತಿ ಪಡೆಯಬಹುದೆಂದು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಸೂಚಿಸಲಾಗಿದೆ. ಆದರೆ, ಈ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುವ ಚಿತ್ರದುರ್ಗ ಜಿಲ್ಲಾಧಿಕಾರಿಗಳು, ವಸತಿ ಇಲಾಖೆಯು ರಾಜ್ಯಾದ್ಯಂತ ಸಾವಿರಾರು ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಪರಿಶೀಲಿಸಿ ಅನುಮತಿ ನೀಡುವುದು ಕಷ್ಟಸಾಧ್ಯವಾಗಿದ್ದು, ಅಭಿವೃದ್ಧಿ ಕಾಮಗಾರಿಗಳಲ್ಲಿ ಹೆಚ್ಚಿನ ವಿಳಂಬ ಉಂಟಾಗುವುದನ್ನು ಮತ್ತು ಆರ್ಥಿಕ ವಿಕೇಂದ್ರಿಕರಣದ ಸರ್ಕಾರದ ನೀತಿಗೆ ಧಕ್ಕೆ ಉಂಟಾಗುವುದನ್ನು ತಪ್ಪಿಸಲು, ನಿರ್ಮಿತಿ ಕೇಂದ್ರಗಳು ಹಾಗೂ ಕಾರ್ನಿಕ ಸಂಸ್ಥೆ ಕೈಗೊಂಡ ಕಾಮಗಾರಿಗಳಲ್ಲಿ ಪರಿಸರ ಪ್ರೇಮಿ ಅಥವಾ ಕ್ರಯ ಪರಿಣಾಮಕಾರಿ ತಂತ್ರಜ್ಞಾನ ಅಥವಾ ನವೀನ ಕಟ್ಟಡ ನಿರ್ಮಾಣ ಸಾಮಗ್ರಿಗಳು ಅಥವಾ ಮೊದಲೇ ಅಚ್ಚು ಹಾಕಿದ ತಂತ್ರಜ್ಞಾನ ಅಳವಡಿಸಿರುವ ಬಗ್ಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಅಥವಾ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ದೃಢೀಕರಿಸಿದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ಪಡೆಯಲು ಅವಕಾಶ ಕಲ್ಪಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಇ 208 ಹೆಚ್‌ಎಎಂ 2009, ಬೆಂಗಳೂರು, ದಿನಾಂಕ: 03ನೇ ನವೆಂಬರ್ 2010.**

ರಾಜ್ಯದಲ್ಲಿನ ನಿರ್ಮಿತಿ ಕೇಂದ್ರಗಳು ಹಾಗೂ ಕಾರ್ನಿಕ ಸಂಸ್ಥೆಗೆ ವಹಿಸಿಕೊಡುವ ಸರ್ಕಾರದ ವಿವಿಧ ಇಲಾಖೆಯ ಕಾಮಗಾರಿಗಳಲ್ಲಿ ಈ ಕೆಳಕಾಣಿಸಿದಂತೆ ಪರಿಸರ ಪ್ರೇಮಿ ಅಥವಾ ಕ್ರಯ ಪರಿಣಾಮಕಾರಿ ತಂತ್ರಜ್ಞಾನ ಅಥವಾ ನವೀನ ಕಟ್ಟಡ ನಿರ್ಮಾಣ ಸಾಮಗ್ರಿಗಳು ಅಥವಾ ಮೊದಲೇ ಅಚ್ಚು ಹಾಕಿದ ತಂತ್ರಜ್ಞಾನ ಅಳವಡಿಸಿರುವ ಬಗ್ಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಅಥವಾ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ದೃಢೀಕರಿಸಿದ ಹಾಗೂ ಕರ್ನಾಟಕ ರಾಜ್ಯ ನಿರ್ಮಾಣ ಕೇಂದ್ರದಿಂದ (ಕಾರ್ನಿಕ್) ತಾಂತ್ರಿಕ ಪರಿಶೀಲನೆಗೊಳಗಾದ ಪ್ರಸ್ತಾವನೆಗಳಿಗೆ ಮಾತ್ರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆಯಿಂದ 2010–11ನೇ ಸಾಲಿಗೆ ವಿನಾಯಿತಿ ಪಡೆಯಲು ಸರ್ಕಾರದ ಅನುಮೋದನೆ ನೀಡಲಾಗಿದೆ.

(ಅ) <u>ಅಡಿಪಾಯಗಳಿಗೆ :</u>

1. ಕಪ್ಪು ಮಣ್ಣಿನಲ್ಲಿ ಪೈಲ್ ಫೌಂಡೇಶನ್ (Pile Foundation)
2. ಸುಣ್ಣ ಬಳಸಿ ಕಪ್ಪು ಮಣ್ಣಿನ ಬಲವೃದ್ಧಿ (Lime Treatment)
3. ಗಟ್ಟಿ ಮಣ್ಣಿನಲ್ಲಿ ಕಮಾನು ಪಾಯ (Arch Foundation)

(ಆ) <u>ಗೋಡೆಗಳಲ್ಲಿ :</u>

1. ದೃಢೀಕರಿಸಿದ ಸಿಮೆಂಟ್ ಹಾಗೂ ಮಣ್ಣಿನ ಇಟ್ಟಿಗೆಗಳು (Stabilised Mud Blocks)
2. ಕಾಡುಗಲ್ಲು ಹಾಗೂ ಗಾರೆಯಿಂದ ತಯಾರಿಸಿದ ಇಟ್ಟಿಗೆಗಳು (Boulder Blocks)
3. ರ್‍ಯಾಟ್ ಟ್ರಾಪ್ ಬಾಂಡ್ (Rat Trap bond)
4. ಹಾರುಬುದಿ ಉಪಯೋಗಿಸಿ ಕಾಂಕ್ರೀಟ್‌ನಿಂದ ತಯಾರಿಸಿದ ಇಟ್ಟಿಗೆಗಳು
5. ಹಾರುಬೂದಿ, ಸುಣ್ಣ ಹಾಗೂ ಜಿಪ್ಸಂ ಉಪಯೋಗಿಸಿ ತಯಾರಿಸಿದ ಇಟ್ಟಿಗೆಗಳು
6. ಫೆರೋಸಿಮೆಂಟ್‌ನ ತೆಳುಗೋಡೆ (Ferro cement walls)

(ಇ) <u>ಮೇಲ್ಚಾವಣಿಯಲ್ಲಿ :</u>

1. ಫೆರೋಸಿಮೆಂಟ್ ಟ್ರಸ್‌ಗಳು ಹಾಗೂ ಮಂಗಳೂರು ಹೆಂಚು
2. ಕಾಂಕ್ರೀಟ್ ತೊಲೆಗಳು ಹಾಗೂ ಫನಿಕ್ಯುಲಾರ್ ಶೆಲ್‌ಗಳು
3. ಕಾಂಕ್ರೀಟ್ ತೊಲೆಗಳು ಹಾಗೂ ಕಾಂಕ್ರೀಟ್ ಸ್ಲಾಬ್‌ಗಳು
4. ಫೆರೋಸಿಮೆಂಟ್ ಛಾವಣಿ
5. ಕಾಂಕ್ರೀಟ್ ತೊಲೆಗಳು ಹಾಗೂ ಜ್ಯಾಕ್ ಆರ್ಚ್ ಛಾವಣಿ
6. ಕಾಂಕ್ರೀಟ್ ತೊಲೆಗಳು ಹಾಗೂ ಕಡಪ ಸ್ಲ್ಯಾಬ್ ಛಾವಣಿ
7. ಕಾಂಕ್ರೀಟ್ ತೊಲೆಗಳು ಹಾಗೂ ಕಾಂಕ್ರೀಟ್ ಬ್ಲಾಕ್ ಛಾವಣಿ (ನಾಗಲಕ್ಷ್ಮೀ ತಂತ್ರಜ್ಞಾನ)

(ಈ) <u>ಇತರೆ :</u>

1. ಆರ್.ಸಿ.ಸಿ. ಬಾಗಿಲ ಚೌಕಟ್ಟುಗಳು
2. ಆರ್.ಸಿ.ಸಿ. ಕಿಟಕಿ ಚೌಕಟ್ಟುಗಳು
3. ಮೊದಲೇ ತಯಾರಿಸಿದ ಲಿಂಟಲ್ ಹಾಗೂ ಸಜ್ಜಾಗಳು
4. ತೆಂಗಿನ ನಾರಿನ, ಬೈಸನ್ ಪ್ಯಾನಲ್, ಫೆರೋಸಿಮೆಂಟ್, ಎಫ್.ಆರ್.ಪಿ. ಬಾಗಿಲುಗಳು
5. ಫೆರೋಸಿಮೆಂಟ್ ಶೌಚಾಲಯಗಳು
6. ಪಿ.ವಿ.ಸಿ. ಬಾಗಿಲು ಚೌಕಟ್ಟು ಹಾಗೂ ಬಾಗಿಲುಗಳು

(ಉ) <u>ಕ್ರಯಪರಿಣಾಮಕಾರಿ, ಪರಿಸರಪ್ರೇಮಿ ಹಾಗೂ ಗೃಹೋಪಯೋಗಿ ವಸ್ತುಗಳು :</u>

1. ಫೆರೋ ಸಿಮೆಂಟ್‌ನಿಂದ ತಯಾರಿಸಲ್ಪಡುವ ಸಾಮಗ್ರಿಗಳು, ನೀರಿನ ತೊಟ್ಟಿ, ಮಂಚ, ಕುರ್ಚಿ, ಮೇಜು, ಶಾಲಾ ಪೀಠೋಪಕರಣಗಳು, ಮೆಟ್ಟಿಲುಗಳು, ಅಡಿಗೆ ಮನೆಯ ಪ್ಲಾಟ್‌ಫಾರಂ, ವಿದ್ಯುತ್ ಮೀಟರ್ ಬೋರ್ಡ್, ಉದ್ಯಾನವನದ ಕುರ್ಚಿಗಳು ಇತ್ಯಾದಿ.
2. ಬಾಗಿಲ ಚೌಕಟ್ಟುಗಳು, ಬಾಗಿಲುಗಳು, ಕೈ ತೊಳೆಯುವ ಬೇಸಿನ್, ಕಸ ಹಾಕುವ ತೊಟ್ಟಿಗಳು, ಶೌಚಾಲಯದ ಪ್ಯಾನ್‌ಗಳು ಹಾಗೂ ಛಾವಣಿ ಶೀಟುಗಳು.

(ಊ) ಹಾರುಬೂದಿಯಿಂದ ತಯಾರಿಸಲ್ಪಡುವ ಕ್ರಯ ಪರಿಣಾಮಕಾರಿ, ಪರಿಸರ ಪ್ರೇಮಿ ಸಾಮಗ್ರಿಗಳು :

ಶಾಖೋತ್ಪನ್ನ, ಉಕ್ಕು ತಯಾರಿಕೆ ಹಾಗೂ ಕಾಗದ ತಯಾರಿಕೆ ಕಾರ್ಖಾನೆಗಳಿಂದ ದೊರಕುವ ನಿರುಪಯೋಗಿ ವಸ್ತುವಾದ ಹಾರುಬೂದಿಯನ್ನು ಉಪಯುಕ್ತ ಕಟ್ಟಡ ನಿರ್ಮಾಣ ಸಾಮಗ್ರಿಗಳಾಗಿ ಪರಿವರ್ತಿಸಿ ಬಾಗಿಲು ಹಾಗು ಕಿಟಕಿಗಳ ಚೌಕಟ್ಟುಗಳು, ಬ್ಲಾಕ್‌ಗಳು, ನೆಲ ಹಾಸುಗಳನ್ನು ತಯಾರಿಸುವುದಲ್ಲದೇ ರಸ್ತೆ ನಿರ್ಮಾಣ ಮತ್ತು ಮೇಲ್ಹಾವಣಿಯ ಕಾಂಕ್ರೀಟಿನಲ್ಲಿ ಗಣನೀಯ ಪ್ರಮಾಣದಲ್ಲಿನ ಉಪಯೋಗ.

(ಎ) ಬೊಂಬಿನ ತಾಂತ್ರಿಕತೆ :

ಬೊಂಬುಗಳನ್ನು ರಾಸಾಯನ ಕ್ರಿಯೆಗೊಳಪಡಿಸಿ, ಅವುಗಳ ಬಲವೃದ್ಧಿಗೊಳಿಸಿ ಅನಂತರ ಮನೆ ಹಾಗೂ ಕಟ್ಟಡ ನಿರ್ಮಾಣದಲ್ಲಿ ಇವುಗಳ ಉಪಯೋಗ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2823

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ಶಾಸಕರುಗಳ ಆಪ್ತ ಸಹಾಯಕರನ್ನು ನೇಮಿಸಲು ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 90 ಶಿಸನೇ 96, ದಿನಾಂಕ : 28–11–96.
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 90 ಶಿಸನೇ 96, ದಿನಾಂಕ : 16–12–96.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 180 ಶಿಸನೇ 99, ದಿನಾಂಕ : 01–02–2000.
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 92 ಶಿಸನೇ 2000, ದಿನಾಂಕ : 16–08–2000.
5. ಅಧಿಸೂಚನೆ ಸಂಖ್ಯೆ ಸಿಆಸುಇ 48 ಎಸ್‌ಆರ್‌ಆರ್ 2009 ದಿನಾಂಕ : 20–01–2010.
6. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 177 ಆಹಿಸೇ 2009, ದಿನಾಂಕ : 23–02–2010.
7. ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ ಇವರ ಪತ್ರ ಸಂಖ್ಯೆ ಸಿಬ್ಬಂದಿ(2)/ವಹಿ–30 : 2010–11 ದಿನಾಂಕ: 1–07–2010 ಮತ್ತು ಸಿಬ್ಬಂದಿ(2) ವಹಿ–112 : 2008–09 ದಿನಾಂಕ : 30–06–2010.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಅಧಿಕೃತ ಜ್ಞಾಪನಗಳಲ್ಲಿ ಮಾನ್ಯ ಶಾಸಕರ ಆಪ್ತ ಸಹಾಯಕರನ್ನು ಒದಗಿಸುವ ಬಗ್ಗೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ಮೇಲೆ ಓದಲಾಗಿರುವ (1) ಮತ್ತು (2)ರ ಅಧಿಕೃತ ಜ್ಞಾಪನಗಳನ್ನು ಭಾಗಶ: ಮಾರ್ಪಡಿಸಿ ರಾಜ್ಯ ಸರ್ಕಾರದ ಯಾವುದೇ ಇಲಾಖೆಗಳಲ್ಲಿನ ಗ್ರೂಪ್ ಸಿ ವೃಂದದ ನೌಕರರನ್ನು ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ನೇಮಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಓದಲಾದ (4)ರ ಆದೇಶದಲ್ಲಿ ನಿಗಮ : ಮಂಡಳಿ : ಸ್ಥಳೀಯ ಸಂಸ್ಥೆಗಳು : ಸ್ವಾಯತ್ತ : ಶಾಸನಬದ್ಧ ಸಂಸ್ಥೆಗಳ ಗ್ರೂಪ್ ಸಿ ವೃಂದದ ನೌಕರರನ್ನು ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ಅವಕಾಶ ನೀಡಿದೆ. ಮೇಲೆ (5)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15ರನ್ವಯ ಮಾನ್ಯ ವಿಧಾನ ಸಭಾ ಮತ್ತು ವಿಧಾನ ಪರಿಷತ್ ಸದಸ್ಯರುಗಳ ಆಪ್ತ ಸಹಾಯಕರನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ (6)ರಲ್ಲಿ ಓದಲಾದ ಆದೇಶದಲ್ಲಿ ಗ್ರೂಪ್ ಸಿ ವೃಂದದಲ್ಲಿ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರು/ಶೀಘ್ರಲಿಪಿಗಾರರಿಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಅವರ ವಿದ್ಯಾರ್ಹತೆಯನುಸಾರ ಕಂದಾಯ ಇಲಾಖೆಯಲ್ಲಿ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರ/ಶೀಘ್ರಲಿಪಿಗಾರರ ಹುದ್ದೆಗಳಿಗೆದುರಾಗಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)( vii )ರನ್ವಯ ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ಸರ್ಕಾರದಿಂದ ಅನುಮೋದಿಸಲ್ಪಟ್ಟ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಿಸಲು ಅವಕಾಶ ನೀಡಿದೆ. ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಧಾರವಾಡ, ಇವರು ಶ್ರೀ ವಿಜಯ ಸಂಕೇಶ್ವರ ಮಾನ್ಯ ವಿಧಾನ ಪರಿಷತ್ ಸದಸ್ಯರು ಶ್ರೀಮತಿ ರಾಜೇಶ್ವರಿ ಕುಲಕರ್ಣಿ ಇವರನ್ನು ಗುತ್ತಿಗೆ ಆಧಾರದ ಮೇಲೆ ತಮ್ಮ ಆಪ್ತ ಸಹಾಯಕರಾಗಿ ಹಾಗೂ ಶ್ರೀ ಸಂತೋಷ್ ಎಸ್. ಲಾಡ್ ಮಾನ್ಯ ವಿಧಾನ ಸಭಾ ಸದಸ್ಯರು ಇವರು ಶ್ರೀ ಎ.ಎನ್. ಸುಬ್ರಮಣ್ಯ ಇವರನ್ನು ತಮ್ಮ ಆಪ್ತ ಸಹಾಯಕರಾಗಿ ನೇಮಿಸಲು ಕೋರಿರುವುದಾಗಿ ತಿಳಿಸಿ, ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರ ಮತ್ತು ಶೀಘ್ರಲಿಪಿಗಾರರ ಹುದ್ದೆಯು ಖಾಲಿ ಇಲ್ಲದಿರುವುದರಿಂದ ಮಾನ್ಯ ಶಾಸಕರ ಆಪ್ತ ಸಹಾಯಕರನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡುವ ಬಗ್ಗೆ ಆಡಳಿತಾತ್ಮಕ ಹಿತದೃಷ್ಟಿಯಿಂದ ಇದಕ್ಕಾಗಿಯೇ ಖಾಯಂ ಹುದ್ದೆಗಳನ್ನು ಸೃಜಿಸುವಂತೆ ಅಭಿಪ್ರಾಯ ಪಟ್ಟಿರುತ್ತಾರೆ. ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 248 ಆಹಿಸೇ 2010 ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2010.**

ಸೂಕ್ತ ಪರಿಶೀಲನೆಯ ನಂತರ ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರು ಮತ್ತು ಶೀಘ್ರಲಿಪಿಗಾರರ ಹುದ್ದೆಗಳು ಲಭ್ಯವಿಲ್ಲದಿರುವ ಕಾರಣ ಒಂದು ಪ್ರಥಮ ದರ್ಜೆ ಸಹಾಯಕರ ಹಾಗೂ ಒಂದು ಶೀಘ್ರಲಿಪಿಗಾರರ ಸಂಖ್ಯಾತಿರಿಕ್ತ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ

ಅಥವಾ ಧಾರವಾಡ ಜಿಲ್ಲಾ ಕಂದಾಯ ಘಟಕದಲ್ಲಿ ವಯೋ ನಿವೃತ್ತಿ ಅಥವಾ ಇನ್ನಿತರೆ ಕಾರಣಗಳಿಂದ ಸದರಿ ಹುದ್ದೆಗಳು ಖಾಲಿಯಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 648 ವೆಚ್ಚ–12/2010 ದಿನಾಂಕ : 23–09–10ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ–1)

ಪಿ.ಆರ್. 2825

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಶಿವಮೊಗ್ಗ ಜಿಲ್ಲಾ ಕಾರಾಗೃಹ (ಹಾಲಿ ತುಮಕೂರು ಜಿಲ್ಲಾ ಕಾರಾಗೃಹದಲ್ಲಿ ಸಹಾಯಕ ಅಧೀಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ) ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ–ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ :**

1. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಸಿಟಿಎಲ್–37/ಸಿಆರ್ 13/2009 ಶಿವಮೊಗ್ಗ ದಿನಾಂಕ : 06–04–2010.
2. ತನಿಖಾಧಿಕಾರಿಯ ಅಂತಿಮ ತನಿಖಾ ವರದಿ ದಿನಾಂಕ : 04–03–2010.
3. ತನಿಖಾಧಿಕಾರಿಯ ದಾಖಲೆಗಳ ವಿವರ :

   ಎ) ಅಸಲು ತನಿಖಾ ವರದಿ, ಪ್ರಥಮ ವರ್ತಮಾನ ವರದಿ ಮತ್ತು ಪಿರ್ಯಾದಿಯ ದೂರಿನ ನಕಲು, ಠಾಣಾ ದಿನಚರಿ ನಕಲು, ಪಂಚಸಾಕ್ಷಿಗಳನ್ನು ಬರಮಾಡಿಕೊಳ್ಳಲು ಸಂಬಂಧಪಟ್ಟ ಅಧಿಕಾರಿಗಳಿಗೆ ಸಲ್ಲಿಸಿದ ಕೋರಿಕೆ ಪತ್ರ ನಕಲುಗಳು, ವಹಿಸುವಿಕೆ ಮತ್ತು ಜಪ್ತಿ ಪಂಚನಾಮೆಗಳ ನಕಲುಗಳು, ಧ್ವನಿ ದೃಢೀಕರಣ ಪಂಚನಾಮೆ ನಕಲು, ಟ್ರ್ಯಾಪ್ ಯಶಸ್ವಿಯಾದ ಬಗ್ಗೆ ನ್ಯಾಯಾಲಯಕ್ಕೆ ಸಲ್ಲಿಸಿದ ವರದಿಯ ನಕಲು, ಸ್ವತ್ತುಪಟ್ಟಿ ನಕಲು, ತನಿಖಾ ಕಾಲದಲ್ಲಿ ತೆಗೆದಿರುವ ಫೋಟೋಗಳ ಛಾಯಾ ಪ್ರತಿಗಳು.

   ಬಿ) ಸಾಕ್ಷಿದಾರರುಗಳ ಹೇಳಿಕೆಗಳ ಮತ್ತು ಮುಂದುವರಿದ ಹೇಳಿಕೆಗಳ ನಕಲು ಪ್ರತಿಗಳು

**ಪ್ರಸ್ತಾವನೆ:**

ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಶಿವಮೊಗ್ಗ (ಹಾಲಿ ತುಮಕೂರು ಜಿಲ್ಲಾ ಕಾರಾಗೃಹದಲ್ಲಿ ಸಹಾಯಕ ಅಧೀಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ) ಇವರ ವಿರುದ್ಧ ಲೋಕಾಯುಕ್ತ ಮೊಕದ್ದಮೆ ಸಂಖ್ಯೆ : 13/2009ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇಲ್ಲಿ ದಾಖಲಿಸಿರುವ ಪ್ರಕರಣದ ತನಿಖಾ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ : 06–04–2010ರ ಪತ್ರದೊಡನೆ ಕಳುಹಿಸುತ್ತಾ, ಆಪಾದಿತನನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ, 1988ರ ಕಲಂ 19(1)ರ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

ಅ) ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ಯಲ್ಲಪ್ಪ, ಶಿವಮೊಗ್ಗ ಇವರ ದೂರು ದಿನಾಂಕ : 17–11–2009.

ಆ) ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರ ಪ್ರಥಮ ವರ್ತಮಾನ ವರದಿ, ಲೋಕಾಯುಕ್ತ ಮೊಕದ್ದಮೆ ಸಂಖ್ಯೆ : 13/2009.

ಇ) ಪೊಲೀಸ್ ಠಾಣೆಯ ದಿನಚರಿ.

ಈ) ಸಾಕ್ಷಿದಾರರುಗಳ ಹೇಳಿಕೆಗಳು (1) ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ಯಲ್ಲಪ್ಪ (2) ಶ್ರೀಮತಿ ಆರ್. ಮಂಜುಳ, ಕೋಂ ಲೇಟ್ ಶಿವಣ್ಣ ಗೌಡ (3) ಶ್ರೀ ಕೆ. ಗಣೇಶ್ ತಂದೆ ಕೃಷ್ಣನಾಯ್ಕ (4) ಶ್ರೀ ಡಿ.ಎಂ. ಶಶಿಧರ ಮೂರ್ತಿ ತಂದೆ ಮಲ್ಲಾಜಪ್ಪ (5) ಶ್ರೀ ಎನ್. ಲಕ್ಷ್ಮಣ ತಂದೆ ಲೇಟ್ ನಿಂಗಯ್ಯ (6) ಶ್ಯಾಮ್ @ ಕೊಕ್ಕರೆ ಶ್ಯಾಮ ತಂದೆ ಲೇಟ್ ಯಲ್ಲಪ್ಪ (7) ಶ್ರೀ ಬಿ.ಎಂ. ಧನಂಜಯ ಮೂರ್ತಿ ತಂದೆ ಬಿ. ಮಲ್ಲೇಗೌಡ (8) ಶ್ರೀ ಸಣ್ಣಪ್ಪ ಎನ್. ಕೋಣನತಲೆ, ಹೆಡ್ ಕಾನ್ಸ್‌ಟೇಬಲ್ (9) ಶ್ರೀ ಜಿ.ಪಿ. ಬಸವರಾಜಪ್ಪ, ಪೊಲೀಸ್ ಹೆಡ್ ಕಾನ್ಸ್‌ಟೇಬಲ್ (10) ಶ್ರೀ ಬಿ. ಶ್ರೀನಿವಾಸ, ಸಿ.ಪಿ.ಸಿ. (11) ಶ್ರೀ ರಮೇಶ್ ಎಸ್. ಪೊಲೀಸ್ ಕಾನ್ಸ್‌ಟೇಬಲ್ (12) ಶ್ರೀ ಐ.ಜೆ. ರಜನಿಕಾಂತ, ಪೊಲೀಸ್ ಕಾನ್ಸ್‌ಟೇಬಲ್ (13) ಶ್ರೀ ಎ. ಮಂಜುನಾಥ, ಪೊಲೀಸ್ ಕಾನ್ಸ್‌ಟೇಬಲ್ (14) ಶ್ರೀ ಆರ್. ಪ್ರಕಾಶ್, ಪೊಲೀಸ್ ಕಾನ್ಸ್‌ಟೇಬಲ್.

ಈ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಲೋಕ್/ಎಸಿಇ/ಸಿಟಿಎ/19/2009–10 ದಿನಾಂಕ : 13–01–2010.

ಉ) ಕೃತ್ಯ ನಡೆದ ಸ್ಥಳದ ನಕಾಶೆ

ಊ) ತನಿಖಾ ಕಾಲದಲ್ಲಿ ಅಮಾನತ್ತುಪಡಿಸಿಕೊಂಡಿರುವ ಮೂಲ ದಾಖಲೆಗಳ ದೃಢೀಕೃತ ನಕಲು ಪ್ರತಿಗಳು.

ತನಿಖಾಧಿಕಾರಿಗಳಾದ ಶ್ರೀ ಎಂ.ಎನ್. ಕರಿಬಸವನಗೌಡ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರು ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಇವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಲೋಕಾಯುಕ್ತ ಮೊಕದ್ದಮೆ ಸಂಖ್ಯೆ : 13/2009 ಕಲಂ 7, 13(1)(ಡಿ) ಸಹವಾಚ 13(2) ಲಂಚ ನಿರೋಧ ಕಾಯ್ದೆ 1988ರ ಪ್ರಕಾರ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ.

ಫಿರ್ಯಾದಿಯಾದ ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ಯಲ್ಲಪ್ಪ, ವಾಸ ಎಲ್ಐಜಿ 23, ಕಲ್ಲಹಳ್ಳಿ, ಹುಡ್ಕೋ ಕಾಲೋನಿ, ಶಿವಮೊಗ್ಗ ಇವರ ಇಬ್ಬರು ಮಕ್ಕಳು ವಿವಿಧ ಕೇಸುಗಳಲ್ಲಿ ಜೈಲಿನಲ್ಲಿದ್ದು, ಅದರಲ್ಲಿ ಒಬ್ಬ ಮಗ ಆನಂದ್ ಎಂಬುವವರನ್ನು ಈಗ್ಗೆ ಎರಡು ವರ್ಷಗಳ ಹಿಂದೆ ಧಾರವಾಡ ಜೈಲಿಗೆ ವರ್ಗಾಯಿಸಲಾಗಿದ್ದು, ಇನ್ನೊಬ್ಬ ಮಗ ಶ್ಯಾಮ, ಗಾಂಜಾ ಕೇಸಿನಲ್ಲಿ ಅರೆಸ್ಟ್ ಆಗಿದ್ದು, ಈ ಬಗ್ಗೆ ಸಹಾಯಕ ಅಧೀಕ್ಷಕರಾದ ಶ್ರೀ ಶಿವಣ್ಣ ಇವರು ಶ್ಯಾಮನನ್ನು ಸಹ ಬೇರೆ ಜೈಲಿಗೆ ಕಳುಹಿಸುತ್ತೇನೆಂದು ಇಲ್ಲದಿದ್ದರೆ ರೂ. 2000–00ಗಳ ಲಂಚಕ್ಕಾಗಿ ಒತ್ತಾಯಿಸಿದ್ದು, ಫಿರ್ಯಾದಿಯು ತಮ್ಮ ಮಗನನ್ನು ಬೇರೆ ಜೈಲಿಗೆ ಕಳುಹಿಸಬೇಡಿ ಎಂದು ತಮ್ಮಲ್ಲಿದ್ದ ರೂ. 1000/– ಕೊಟ್ಟಿರುತ್ತಾರೆಂದು, ಶಿವಣ್ಣನವರು ಇನ್ನೂ 1000/– ಕ್ಕೆ ಒತ್ತಾಯಿಸಿದ್ದರಿಂದ, ಆರೋಪಿತ ಅಧಿಕಾರಿಯಾದ ಶ್ರೀ ಶಿವಣ್ಣರವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದಿನಾಂಕ : 17–11–2009ರಂದು ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮವನ್ನು ನೆರವೇರಿಸಿದ ನಂತರ ದಿನಾಂಕ : 17–11–2009ರಂದು ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ, ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಅಕ್ರಮ ಸಂಭಾವನೆಯಾದ ರೂ. 1000/–ಗಳನ್ನು ಪಡೆಯುತ್ತಿದ್ದಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ. ಆಪಾದಿತ ಅಧಿಕಾರಿಯ ಎರಡೂ ಹಸ್ತದ ಕೈಬೆರಳುಗಳನ್ನು ತಯಾರಿಸಿಟ್ಟಿದ್ದ ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳೆಸಿದಾಗ, ದ್ರಾವಣ ಬಣ್ಣ ಬದಲಾಗಿ ಆಪಾದಿತರು ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ ಹಾಗೂ ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹಾ ದೃಢಪಟ್ಟಿರುತ್ತದೆ. ಅಕ್ರಮ ಸಂಭಾವನೆಯಾದ ರೂ. 1000/–ಗಳನ್ನು ಶ್ರೀ ಶಿವಣ್ಣ (ಹಣ ಪಡೆದ ವ್ಯಕ್ತಿ) ಇವರಿಂದ ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಲೋಕಾಯುಕ್ತ ಅಧಿಕಾರಿಗಳು ಒದಗಿಸಿರುವ ಎಲ್ಲಾ ದಾಖಲೆಗಳನ್ನು ಸಾಕ್ಷ್ಯಗಳ ಹೇಳಿಕೆಗಳನ್ನು ಸಂದರ್ಭಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಆರೋಪಿತ ಸರ್ಕಾರಿ ಅಧಿಕಾರಿಯು ಫಿರ್ಯಾದುದಾರರಿಂದ ಲಂಚ ರೂ. 1000/–ಗಳನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಮ 7, 13(1)(ಡಿ) ಸಹವಾಚ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಸಹವಾಚ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಆಪಾದಿತ ಅಧಿಕಾರಿಯಾದ ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು ಇವರ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಕಲಂ 7 13(1)(ಡಿ) ಸಹವಾಚ ಕಲಂ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡುವುದು ಅಗತ್ಯವೆಂದು ಪರಿಗಣಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 62 ಪಿಆರ್‌ಇ 2010 ಬೆಂಗಳೂರು, ದಿನಾಂಕ: 10ನೇ ನವೆಂಬರ್ 2010.**

ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ)ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಜಿಲ್ಲಾ ಕಾರಾಗೃಹ, ತುಮಕೂರು ಇವರ ವಿರುದ್ಧದ ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13(1)(ಡಿ) ಸಹವಾಚ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1)ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ : 10–11–2010 ರಂದು ಹೊರಡಿಸಲಾಗಿದೆ.

ಈ ಹಿಂದೆ ಹೊರಡಿಸಿದ್ದ ಸಮ ಸಂಖ್ಯೆಯ ದಿನಾಂಕ : 02–08–2010ರ ಆದೇಶವನ್ನು ಈ ಮೂಲಕ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

ಪಿ.ಆರ್. 2826

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಕೋಲಾರ ಜಿಲ್ಲಾ ಪಂಚಾಯತ್, ರವರ ವಿರುದ್ಧ ದಾಖಲಾಗಿರುವ ಲಂಚ ಸ್ವೀಕಾರ ಪ್ರಕರಣದ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ಲೋಕಾಯುಕ್ತ ಕಛೇರಿಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಪತ್ರ ದಿನಾಂಕ 15–02–2010 ಹಾಗೂ 23–07–2010.
2. ಟ್ರ್ಯಾಪ್ ಪಂಚನಾಮೆ ವರದಿ.

**ಪ್ರಸ್ತಾವನೆ:**

ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಕೋಲಾರ ಜಿಲ್ಲಾ ಪಂಚಾಯತ್, ಇವರ ವಿರುದ್ಧ ಡಾ: ಎನ್. ರಮೇಶ್‌ಬಾಬು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಕೋಲಾರ ರವರು ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಮುಂದೆ ಹಾಜರಾಗಿ ನೀಡಿದ ದೂರಿನ ಹಿನ್ನೆಲೆಯಲ್ಲಿ ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13(1)(ಡಿ) ಸಹವಾಚನ ಕಲಂ 13(2)ರ ರೀತ್ಯಾ ದಿನಾಂಕ 06–02–2010 ರಂದು ಮೊಕದ್ದಮೆ ಸಂಖ್ಯೆ : 7/2010 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡು ಶ್ರೀ ಎಂ. ಶ್ರೀನಿವಾಸನ್ ರವರನ್ನು ತಮ್ಮ ಸಿಬ್ಬಂದಿ ಹಾಗೂ ಪಂಚಸಾಕ್ಷಿಗಳ ಸಮೇತ ದಿನಾಂಕ : 06–02–2010 ರಂದು ಲಂಚದ ಹಣ 3.00 ಲಕ್ಷಗಳನ್ನು ಸ್ವೀಕರಿಸಿದಾಗ ಲೋಕಾಯುಕ್ತದ ಬಲೆಗೆ ಸಿಲುಕಿರುತ್ತಾರೆ. ಈ ಹಿನ್ನೆಲೆಯಲ್ಲಿ ಶ್ರೀ ಎಂ. ಶ್ರೀನಿವಾಸನ್ ರವರನ್ನು ದಿನಾಂಕ 06–02–2010 ರಂದು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದ್ದು, ಈ ಕುರಿತು ಸೂಕ್ತ ಕ್ರಮ ತೆಗೆದುಕೊಳ್ಳಲು ಪಿರ್ಯಾದುದಾರರ ದೂರು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ ಮತ್ತು ಟ್ರ್ಯಾಪ್ ಪಂಚನಾಮೆಯ ಪ್ರತಿಗಳನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 15–02–2010 ಮತ್ತು 23–07–2010ರ ಪತ್ರದೊಂದಿಗೆ ಹೆಚ್ಚುವರಿ ಪೊಲೀಸ್

ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚನಿರೋಧ ಕಾಯ್ದೆ 1988ರ ಕಲಂ 19((1)(ಬಿ) ರಡಿಯಲ್ಲಿ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 23–07–2010ರ ಪತ್ರದಲ್ಲಿ ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೋಲಾರ ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13(1)(ಡಿ) ಸಹವಾಚನ ಕಲಂ 13(2)ರ ರೀತ್ಯಾ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅಭಿಯೋಜನೆಗೆ ಒಳಪಡಿಸಲು ಸದರಿ ಕಾಯ್ದೆಯ ಕಲಂ 19(1)(ಬಿ) ರನ್ವಯ ಮಂಜೂರಾತಿ ನೀಡಲು ಕೋರಿರುತ್ತಾರೆ, ಹಾಗೂ ತಮ್ಮ ಪತ್ರದೊಂದಿಗೆ ತನಿಖಾ ವರದಿಯ ಪ್ರತಿ, ಪ್ರಥಮ ವರ್ತಮಾನ ವರದಿಯ ಪ್ರತಿ, ಟ್ರ್ಯಾಪ್ ಪೂರ್ವದ ಮಹಜರ್, ಟ್ರ್ಯಾಪ್ ನಡವಳಿಗಳು, ರಾಸಾಯನಿಕ ತಜ್ಞರ ವರದಿ, ವಶಪಡಿಸಿಕೊಂಡ ದಾಖಲೆಗಳ ಪ್ರತಿ, ಕೃತ್ಯ ನಡೆದ ಸ್ಥಳದ ನಕ್ಷೆ, ದಾಖಲೆಗಳ ಪ್ರತಿ ಮತ್ತು ಸಾಕ್ಷಿಗಳ ಹೇಳಿಕೆಗಳನ್ನು ಒದಗಿಸಿರುತ್ತಾರೆ. ಲೋಕಾಯುಕ್ತದ ಕಛೇರಿಯಿಂದ ಬಂದ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

(1) ಡಾ: ಎನ್. ರಮೇಶ್ ಬಾಬು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಕೋಲಾರ ಜಿಲ್ಲೆ, ರವರು ದಿನಾಂಕ 06–02–2010ರಂದು ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರಿಗೆ ನೀಡಿದ ದೂರು ಅರ್ಜಿ.
(2) ಕರ್ನಾಟಿಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಇಲ್ಲಿನ ಕ್ರೈಂ ನಂ. 7/2010ರಲ್ಲಿ ದಾಖಲಿಸಿದ ಪ್ರಥಮ ವರ್ತಮಾನ ವರದಿ.
(3) ದಿ : 06–02–2010ರ ಪ್ರಾಯೋಗಿಕ ಪಂಚನಾಮೆ ವರದಿ.
(4) ದಿ : 06–02–2010ರ ಟ್ರ್ಯಾಪ್ ಮಹಜರ್ ವರದಿ.
(5) ಡಾ: ಪ್ರಕಾಶ್ ಮತ್ತು ಮುನಿರಾಜು ರವರುಗಳು ಶ್ರೀ ಎಂ. ಶ್ರೀನಿವಾಸನ್ ರವರೊಂದಿಗೆ ನಡೆಸಿದ ಸಂಭಾಷಣೆಯ ಧ್ವನಿಮುದ್ರಿಕೆಯ ಲಿಪೀಕರಣದ ಪ್ರತಿಗಳು.
(6) ರಾಸಾಯನಿಕ ಪರಿವೀಕ್ಷಣಾ ವರದಿ ಸಂ. ಪಿಹೆಚ್ಐ/ಸಿಎಂಇ/ಎಲ್ಒಕೆ/173/09-10, ದಿನಾಂಕ : 10–02–2010.
(7) ಕೃತ್ಯ ನಡೆದ ಸ್ಥಳದ ನಕ್ಷೆ.
(8) ಡಾ: ರಮೇಶ್‌ಬಾಬು ಬಿನ್ ಟಿ. ನರಸಿಂಹಲುನಾಯ್ಡು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಕೋಲಾರ ಇವರ ದಿ: 06–02–2010ರ ಹೇಳಿಕೆ.
(9) ಡಾ: ಕೆ.ಎಸ್. ಪ್ರಕಾಶ್ ಬಿನ್ ಲೇಟ್ ಟಿ.ಕೃಷ್ಣೇಗೌಡ, ಜಿಲ್ಲಾ ಕ್ಷಯರೋಗ ನಿವಾರಣಾಧಿಕಾರಿ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರ ಕಛೇರಿ, ಕೋಲಾರ ರವರ ದಿ : 06–02–2010ರ ಹೇಳಿಕೆ.
(10) ಶ್ರೀ ಮುನಿರಾಜು ಬಿನ್ ಲೇಟ್ ಚಿಕ್ಕಮುನಿಯಪ್ಪ, ಪ್ರ.ದ.ಸಹಾಯಕ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರ ಹೇಳಿಕೆ ದಿನಾಂಕ 06-02-2010.
(11) ಶ್ರೀ ಎಂ.ಎಸ್. ರವಿಕುಮಾರ್ ಬಿನ್ ಅಪ್ಪಾಜಿಗೌಡ, ಪ್ರ.ದ.ಸಹಾಯಕ, ಸಾರಿಗೆ ಆಯುಕ್ತರ ಕಛೇರಿ, ಬಹುಮಹಡಿ ಕಟ್ಟಡ, ಬೆಂಗಳೂರುರವರ ದಿ : 06–02–2010ರ ಹೇಳಿಕೆ.
(12) ಶ್ರೀ ರಾಮಚಂದ್ರಪ್ಪ ಬಿನ್ ಲೇಟ್ ಪುಟ್ಟರಂಗಪ್ಪ ಪ್ರ.ದ.ಸಹಾಯಕ, ಸಾರಿಗೆ ಆಯುಕ್ತರ ಕಛೇರಿ, ಬಹುಮಹಡಿ ಕಟ್ಟಡ, ಬೆಂಗಳೂರುರವರ ದಿ : 06–02–2010ರ ಹೇಳಿಕೆ.
(13) ಶ್ರೀ ಆರ್. ಶ್ರೀನಿವಾಸಮೂರ್ತಿ, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ದಿ : 11–02–2010ರ ಹೇಳಿಕೆ.
(14) ಶ್ರೀ ಎಸ್.ಪಿ.ಪರಮೇಶ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ದಿ : 06–02–2010ರ ಹೇಳಿಕೆ.
(15) ಶ್ರೀ ಡಿ.ಸುರೇಶ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಬೆಂಗಳೂರು ರವರ ದಿ : 06–02–2010ರ ಹೇಳಿಕೆ.
(16) ಶ್ರೀ ರಾಮಯ್ಯ, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಬೆಂಗಳೂರು ರವರ ದಿ : 06–02–2010ರ ಹೇಳಿಕೆ.
(17) ಶ್ರೀಮತಿ ಶೈಲಾಕುಮಾರಿ ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಬೆಂಗಳೂರು ರವರ ದಿ : 06–02–2010ರ ಹೇಳಿಕೆ.
(18) ಶ್ರೀ ಕೆ. ರವಿಶಂಕರ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಬೆಂಗಳೂರು ರವರ ಹೇಳಿಕೆ.
(19) ಶ್ರೀ ಲಕ್ಷ್ಮೀನಾರಾಯಣ, ಉಪ ಕಾರ್ಯದರ್ಶಿಗಳು (ಅಭಿವೃದ್ಧಿ) ಕೋಲಾರ ರವರ ದಿ : 06–02–2010ರ ಹೇಳಿಕೆ.
(20) ಶ್ರಿ ಹೇಮಾರೆಡ್ಡಿ ಬಿನ್ ವೆಂಕಟರೆಡ್ಡಿ, ಪ್ರ.ದ.ಸಹಾಯಕ, ಜಿ.ಪಂ.ಕಛೇರಿ, ಕೋಲಾರ ರವರ ದಿ : 06–02–2010ರ ಹೇಳಿಕೆ.
(21) ಶ್ರೀ ವೆಂಕಟೇಶಪ್ಪ, ಎಂ. ಬಿನ್ ಕೆ.ಮುನಿಶ್ವಾಮಪ್ಪ, ಡಿ ದರ್ಜೆ ನೌಕರ, ಜಿ.ಪಂ.ಅಧ್ಯಕ್ಷರ ಕಛೇರಿ, ಕೋಲಾರ ರವರ ಹೇಳಿಕೆ ದಿನಾಂಕ : 06-02-2010.
(22) ಶ್ರೀ ಸುಬ್ರಮಣಿ ಎಸ್. ಬಿನ್ ಲೇಟ್ ಚಿನ್ನಪ್ಪಯ್ಯ, ಡಾಟಾ ಎಂಟ್ರಿ ಆಪರೇಟರ್, ಜಿಲ್ಲಾ ಪಂಚಾಯತ್ ಕಛೇರಿ, ಕೋಲಾರ ರವರ ಹೇಳಿಕೆ ದಿ : 06-02-2010.
(23) ಶ್ರೀ ವಿ. ಪ್ರವೀಣ್‌ಕುಮಾರ್ ಬಿನ್ ಸಿ. ವೆಂಕಟೇಶಪ್ಪ, ವಿದ್ಯಾರ್ಥಿ, ಕನಕನಪಾಳ್ಯ, ಕೋಲಾರ ರವರ ಹೇಳಿಕೆ ದಿ : 09–02–2010.
(24) ಶ್ರೀ ಮುಸ್ತಾಕ್ ಅಹ್ಮದ್ ಜೆ.ಇ., ಲೋಕೋಪಯೋಗಿ ಇಲಾಖೆ, ಕೋಲಾರ ರವರ ಹೇಳಿಕೆ ದಿ : 15–02–2010.
(25) ಶ್ರೀ ತಿರುಪತಯ್ಯ ಬಿನ್ ಬೆಂಚಲವಯ್ಯ, ಬ್ರಾಂಚ್ ಮ್ಯಾನೇಜರ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ರವರ ಹೇಳಿಕೆ ದಿ : 09–02–2010.

(26) ಶ್ರೀ ಎಸ್.ಪಿ. ಪರಮೇಶ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ದಿ : 25–06–2010ರ ಹೇಳಿಕೆ.

(27) ಲಂಚ ಕೇಳಲು ಆಧಾರವಾದ ಡಾ: ಎನ್.ರಮೇಶ್‌ಬಾಬು, ಜಿಲ್ಲಾ ಆರೋಗ್ಯ ಕುಟುಂಬ ಕಲ್ಯಾಣಾಧಿಕಾರಿ ರವರು ನಡೆಸಿರುವರು ಎನ್ನಲಾದ ಅವ್ಯವಹಾರ ಮತ್ತು ಹಣ ದುರುಪಯೋಗದ ವಿವರವಿರುವ ದಿ : 10–12–2009ರ ಅಧ್ಯಕ್ಷರು, ಜಿ.ಪಂ. ಕೋಲಾರ ರವರ ಪತ್ರ ಮತ್ತು ದಾಖಲೆ.

(28) ಆಪಾದಿತರಾದ ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿ.ಪಂ.ಕೋಲಾರ ರವರ ಸಮಜಾಯಷಿ ಹೇಳಿಕೆ ದಿ : 06–02–2010.

ತನಿಖಾಧಿಕಾರಿಗಳಾದ ಶ್ರೀ ಯು.ಡಿ. ಕೃಷ್ಣಕುಮಾರ್, ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಶ್ರೀ ಎಸ್. ಮಂಜುನಾಥ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಕೋಲಾರ ಜಿಲ್ಲೆ, ಕೋಲಾರ ಇವರು ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೋಲಾರ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗದಲ್ಲಿ ಈ ಮೊದಲು ದಾಖಲಾಗಿದ್ದ ಮೊಕದ್ದಮೆ ಸಂಖ್ಯೆ : 07/2010 ಕಲಂ 7, 13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ, 1988ರ ಪ್ರಕರಣವು ಸರಹದ್ದಿನ ಆಧಾರದ ಮೇಲೆ ಕೋಲಾರ ಲೋಕಾಯುಕ್ತ ಘಟಕಕ್ಕೆ ವರ್ಗಾವಣೆ ಯಾಗಿದ್ದು, ಅದರಂತೆ ಸದರಿ ಪ್ರಕರಣವನ್ನು ಮರುನೋಂದಾಯಿಸಿ ತನಿಖೆ ಕೈಗೊಂಡಿರುತ್ತಾರೆ. ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೋಲಾರ ರವರು ಡಾ: ಎನ್. ರಮೇಶ್‌ಬಾಬು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಕೋಲಾರ ಹಾಗೂ ಅವರ ಸಹದ್ಯೋಗಿಗಳಾದ ಡಾ: ಕೆ.ಎನ್. ಪ್ರಕಾಶ್ ಮತ್ತು ಶ್ರೀ ಮುನಿರಾಜು ಎಂಬುವವರಿಗೆ ಸಹಾಯ ಮಾಡಲು ಅಕ್ರಮ ಸಂಭಾವನೆಯಾದ ರೂ. 3.00 ಲಕ್ಷಗಳನ್ನು ಪಡೆಯುತ್ತಿದ್ದಾಗ ಲೋಕಾಯುಕ್ತ ಬಲೆಗೆ ಸಿಕ್ಕಿಹಾಕಿಕೊಂಡಿರುತ್ತಾರೆ. ಶ್ರೀ ಎಂ. ಶ್ರೀನಿವಾಸನ್ ರವರ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೆಟ್ ದ್ರಾವಣದಲ್ಲಿ ತೊಳೆಸಿದಾಗ ಮತ್ತು ಅಕ್ರಮ ಸಂಭಾವನೆಯಾಗಿ ಪಡೆದ ಹಣವನ್ನು ಇಟ್ಟ ಮೇಜನ್ನು ಕೋರಾ ಬಟ್ಟೆಯಿಂದ ಒರೆಸಿ, ಸದರಿ ಬಟ್ಟೆಯನ್ನು ಸೋಡಿಯಂ ಕಾರ್ಬೋನೆಟ್ ಮಿಶ್ರಣದಲ್ಲಿ ಅದ್ದಿ ತೊಳೆದಾಗ ಬಣ್ಣ ರಹಿತವಾದ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ, ಫಿರ್ಯಾದಿ ಹಾಗೂ ಆಪಾದಿತರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ 3.00 ಲಕ್ಷಗಳನ್ನು ಶ್ರೀ ಎಂ. ಶ್ರೀನಿವಾಸನ್ ರವರಿಂದ ಜಿಲ್ಲಾ ಪಂಚಾಯತ್ ಕೋಲಾರದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್ ಕೋಲಾರ ಇವರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2) ರಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಅವರನ್ನು ಈ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವುದು ಸೂಕ್ತವೆಂದು ಕಂಡುಬರುವುದರಿಂದ ಹಾಗೂ ಈ ಅಧಿಕಾರವನ್ನು ಸರ್ಕಾರ ಹೊಂದಿರುವುದರಿಂದ, ಈ ಕೆಳಕಾಣಿಸಿದ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 182 ಜಿಪಸ 2010 ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2010.**

ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೋಲಾರ, ಇವರನ್ನು ಸ್ಥಾನದಿಂದ ತೆಗೆದುಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೋಲಾರ, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 286ರ ಪ್ರಕಾರ ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೋಲಾರರವರು ಭಾರತ ದಂಡ ಸಂಹಿತೆಯ 21ನೇ ಪ್ರಕರಣ ಮತ್ತು ಭ್ರಷ್ಟಾಚಾರ ನಿವಾರಣ 1988ರ ಅರ್ಥವ್ಯಾಪ್ತಿಯಲ್ಲಿ ಲೋಕ ನೌಕರನಾಗಿರುವುದರಿಂದ ಸರ್ಕಾರವು ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ಶ್ರೀನಿವಾಸನ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೋಲಾರ, ಇವರನ್ನು ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮ 18 ಮತ್ತು 19(1)ರಲ್ಲಿ ಸರ್ಕಾರದ ಆದೇಶ/ಅಧಿಸೂಚನೆಗಳನ್ನು ಹೊರಡಿಸಲು ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 2827

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಬರವಣಿಗೆ ಸಾಮರ್ಥ್ಯವನ್ನು ಕುಂಠಿತಗೊಳಿಸುವ ಚಲನವಲನ ವೈಕಲ್ಯ ಮತ್ತು ಮೆದುಳಿನ ಪಾರ್ಶ್ವವಾಯು (Locomotor disability and Cerebral palsy) ಅಂಗವಿಕಲತೆಯನ್ನು ಹೊಂದಿದ ಅಭ್ಯರ್ಥಿಗಳಿಗೆ ಗೆಜೆಟೆಡ್ ಪ್ರೊಬೆಷನರ್‌ಗಳ ಮುಖ್ಯ ಪರೀಕ್ಷೆಯನ್ನು ಬರೆಯಲು ಹೆಚ್ಚುವರಿ ಸಮಯಾವಕಾಶ ನೀಡುವ ಬಗ್ಗೆ.

**ಓದಲಾಗಿದೆ :** ದಿನಾಂಕ : 30–10–2007ರ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 74 ಸೆನೆನಿ 2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 30–10–2007ರ ಆದೇಶದಲ್ಲಿ ಕರ್ನಾಟಕ ಲೋಕಸೇವಾ ಆಯೋಗ/ಸರ್ಕಾರದ ವಿವಿಧ ಇಲಾಖೆಗಳಲ್ಲಿ ಆಯ್ಕೆ ಪ್ರಾಧಿಕಾರಗಳು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಅಂಧ/ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಸಿವಿಲ್ ಸೇವಾ ಪರೀಕ್ಷೆಯನ್ನು ಬರೆಯಲು ಲಿಪಿಕಾರರನ್ನು

ಒದಗಿಸಲು ಮತ್ತು ಪ್ರತಿ ಒಂದು ಗಂಟೆಗೆ ಹತ್ತು ನಿಮಿಷಗಳ ಹೆಚ್ಚುವರಿ ಸಮಯವನ್ನು ನೀಡಲು ಆದೇಶಿಸಲಾಗಿದೆ. ಇದೇ ರೀತಿ ಚಲನವಲನ ವೈಕಲ್ಯ(Locomotor disability) ಮತ್ತು ಮೆದುಳಿನ ಪಾರ್ಶ್ವವಾಯುಗ (Cerebral palsy) ಒಳಗಾದ ಅಂಗವಿಕಲರಿಗೆ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗೆಜೆಟೆಡ್ ಪ್ರೊಬೆಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರನ್ವಯ ಲೋಕಸೇವಾ ಆಯೋಗವು ನಡೆಸುವ ಪರೀಕ್ಷೆಯಲ್ಲಿ ಪ್ರತಿ ಒಂದು ಗಂಟೆಗೆ ಇಪ್ಪತ್ತು ನಿಮಿಷಗಳ ಹೆಚ್ಚುವರಿ ಸಮಯಾವಕಾಶವನ್ನು ನೀಡುವಂತೆ ಕೋರಿ ಸರ್ಕಾರದಲ್ಲಿ ಮನವಿ/ಕೋರಿಕೆಗಳು ಸ್ವೀಕೃತವಾಗಿವೆ.

ಮೇಲ್ಕಂಡ ಕೋರಿಕೆಯ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಚಲನವಲನ ವೈಕಲ್ಯ (Locomotor disability) ಮತ್ತು ಮೆದುಳಿನ ಪಾರ್ಶ್ವವಾಯು (Cerebral palsy)ಗೆ ಒಳಗಾದ ಅಂಗವಿಕಲರಿಗೆ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗೆಜೆಟೆಡ್ ಪ್ರೊಬೆಷನರ್‌ಗಳ ಹುದ್ದೆಗಳ ನೇಮಕಾತಿಗೆ ನಡೆಸುವ ಸ್ಪರ್ಧಾತ್ಮಕ ಮುಖ್ಯ ಪರೀಕ್ಷೆಯಲ್ಲಿ ಉತ್ತರಿಸಲು ಪ್ರತಿ ಒಂದು ಗಂಟೆ ಪರೀಕ್ಷಾವಧಿಗೆ ಇಪ್ಪತ್ತು ನಿಮಿಷಗಳ ಹೆಚ್ಚುವರಿ ಸಮಯಾವಕಾಶವನ್ನು ನೀಡಲು ಸರ್ಕಾರ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 171 ಸೆನೆನಿ 2010 ಬೆಂಗಳೂರು, ದಿನಾಂಕ: 19ನೇ ನವೆಂಬರ್ 2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ , ಕರ್ನಾಟಕ ಗೆಜೆಟೆಡ್ ಪ್ರೊಬೆಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರನ್ವಯ ರಾಜ್ಯ ಸಿವಿಲ್ ಸೇವೆಗಳಲ್ಲಿನ ಗೆಜೆಟೆಡ್ ಪ್ರೊಬೆಷನರ್‌ಗಳ ಹುದ್ದೆಗಳ ನೇಮಕಾತಿಗೆ ನಡೆಸುವ ಸ್ಪರ್ಧಾತ್ಮಕ ಮುಖ್ಯ ಪರೀಕ್ಷೆಯಲ್ಲಿ ಚಲನವಲನ ವೈಕಲ್ಯ(Locomotor disability) ಮತ್ತು ಮೆದುಳಿನ ಪಾರ್ಶ್ವವಾಯು (Cerebral palsy)ಗೆ ಒಳಗಾದ ಅಂಗವಿಕಲ ಅಭ್ಯರ್ಥಿಗಳಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪ್ರಶ್ನೆ ಪತ್ರಿಕೆ ಉತ್ತರಿಸಲು ಪ್ರತಿ ಒಂದು ಗಂಟೆ ಪರೀಕ್ಷಾವಧಿಗೆ ಇಪ್ಪತ್ತು ನಿಮಿಷಗಳ ಹೆಚ್ಚುವರಿ ಸಮಯಾವಕಾಶ ನೀಡಲು ಸರ್ಕಾರ ಆದೇಶಿಸಿದೆ.

1. ಅಭ್ಯರ್ಥಿಯು ಅಂಗವಿಕಲ ಮೀಸಲಾತಿ ಸೌಲಭ್ಯ ಕೋರಿ ಅರ್ಜಿಯೊಂದಿಗೆ ನಿಗದಿತ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಿರಬೇಕು.
2. ಚಲನವಲನ ವೈಕಲ್ಯ (Locomotor disability) ಮತ್ತು ಮೆದುಳಿನ ಪಾರ್ಶ್ವವಾಯು (Cerebral palsy)ಗೆ ಒಳಗಾದ ಅಂಗವಿಕಲ ಅಭ್ಯರ್ಥಿಗಳ ಬರವಣಿಗೆ ಸಾಮರ್ಥ್ಯವು ಕುಂಠಿತವಾಗಿರಬೇಕು. (ಅಂಗವಿಕಲತೆಯ ಪ್ರಮಾಣ ಶೇಕಡ 40 ಹಾಗೂ ಅದಕ್ಕಿಂತ ಹೆಚ್ಚಿನದಾಗಿರಬೇಕು)
3. ಈ ಅಭ್ಯರ್ಥಿಗಳು, ಅಂದರೆ ಚಲನವಲನ ವೈಕಲ್ಯ (Locomotor disability) ಮತ್ತು ಮೆದುಳಿನ ಪಾರ್ಶ್ವವಾಯು (Cerebral palsy)ಗೆ ಒಳಗಾದ ಅಂಗವಿಕಲ ಅಭ್ಯರ್ಥಿಗಳು ಲಿಪಿಕಾರರ (scribe) ಸಹಾಯ ಪಡೆಯುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವಾ ನಿಯಮಗಳು–1)

ಪಿ.ಆರ್. 2866

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಂ.ವಿ. ವೀರಭದ್ರಯ್ಯ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, Deputy Manager, (R&R) U.K.P. Bagalkote, ಇವರು ಸ್ವ–ಇಚ್ಛಾ ನಿವೃತ್ತಿ ಹೊಂದಲು ಸಲ್ಲಿಸಿರುವ ಮನವಿಯನ್ನು ಹಿಂಪಡೆಯಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ** :
1. ಅಧಿಕಾರಿಯವರ ಮನವಿ ದಿನಾಂಕ : 27–08–2008.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 15 ಅಸೇನಿ 2008, ದಿನಾಂಕ : 05–12–2008.
3. ಅಧಿಕಾರಿಯವರು ಸ್ವ–ಇಚ್ಛಾ ನಿವೃತ್ತಿ ಹಿಂಪಡೆಯಲು ಸಲ್ಲಿಸಿದ ಮನವಿ ದಿನಾಂಕ : 19–01–2009.

**ಪ್ರಸ್ತಾವನೆ:**

ಶ್ರೀ ಎಂ.ವಿ. ವೀರಭದ್ರಯ್ಯ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ : 27–08–2008ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ವೈಯುಕ್ತಿಕ ಕಾರಣದಿಂದ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಲು ಕೆ.ಸಿ.ಎಸ್.ಆರ್. ನಿಯಮ 285 ರಡಿಯಲ್ಲಿ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿದ್ದರು. ಸದರಿಯವರ ಮನವಿಯಲ್ಲಿ ತಿಳಿಸಿದ ಕಾರಣಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ : 05–12–2008ರ ಅಧಿಸೂಚನೆಯಲ್ಲಿ ಅಧಿಕಾರಿಯವರಿಗೆ ದಿನಾಂಕ : 01–04–2009 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿತ್ತು. ಆದರೆ ಸದರಿ ಅಧಿಕಾರಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ : 19–01–2009ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಸ್ವ–ಇಚ್ಛಾ ನಿವೃತ್ತಿ ಹೊಂದಲು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯನ್ನು ಹಿಂತೆಗೆದುಕೊಂಡಿರುವುದಾಗಿಯೂ ಹಾಗೂ ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ : 05–12–2008ರ ಆದೇಶದಲ್ಲಿ ಸ್ವ–ಇಚ್ಛಾ ನಿವೃತ್ತಿ ಹೊಂದಲು ಸರ್ಕಾರವು ನೀಡಿರುವ ಅನುಮತಿಯು ದಿನಾಂಕ 01–04–2009 ರಿಂದ ಜಾರಿಗೆ ಬರುವುದರಿಂದ, ಅದಕ್ಕೂ ಮೊದಲೇ ಸ್ವ–ಇಚ್ಛಾ ನಿವೃತ್ತಿ ಹೊಂದಲು ಸಲ್ಲಿಸಿರುವ ಮನವಿಯನ್ನು ವಾಪಸ್ಸು ಪಡೆದಿರುವುದರಿಂದ, ಸರ್ಕಾರಿ ಆದೇಶವನ್ನು ರದ್ದುಗೊಳಿಸಿ, ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನುಮತಿ ನೀಡಲು ಕೋರಿದ್ದಾರೆ.

ಶ್ರೀ ಎಂ.ವಿ. ವೀರಭದ್ರಯ್ಯ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಇವರು ಸ್ವ–ಇಚ್ಛಾ ನಿವೃತ್ತಿ ಹೊಂದಲು ಸಲ್ಲಿಸಿರುವ ಮನವಿಯನ್ನು ಹಿಂದಕ್ಕೆ ಪಡೆದಿರುವುದರಿಂದ, ಅದರಂತೆ ಸೇವೆಯಲ್ಲಿ ಮುಂದುವರೆಸಲು ಸರ್ಕಾರಕ್ಕೆ ಸೂಕ್ತ ನಿರ್ದೇಶನ ನೀಡುವಂತೆ, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 1233/2009ರ ಮೇಲೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ : 20–11–2009ರಂದು

ಹಾಗೂ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು W.P. No. 14426/2010 ದಿನಾಂಕ : 26-05-2010ಗಳಲ್ಲಿ ನೀಡಿರುವ ತೀರ್ಪುಗಳನ್ನು ಅನುಷ್ಠಾನಕ್ಕೆ ತರಲು ಸರ್ಕಾರವು ನಿರ್ಧರಿಸಿ, ಅದರಂತೆ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 15 ಅಸೇನಿ 2010, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಎಂ.ವಿ. ವೀರಭದ್ರಯ್ಯ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, Deputy Manager, (R&R) U.K.P. Bagalkote, ಇವರಿಗೆ ಅಧಿಸೂಚನೆ ಸಂಖ್ಯೆ : ಸಿಆಸುಇ 15 ಅಸೇನಿ 2008, ದಿನಾಂಕ : 05-12-2008 ರಲ್ಲಿ ಸ್ವ-ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿರುವ ಆದೇಶವನ್ನು ರದ್ದುಗೊಳಿಸಿ, ಅಧಿಕಾರಿಯವರು ದಿನಾಂಕ : 19-01-2009 ರಂದು ಸ್ವ-ಇಚ್ಛಾ ನಿವೃತ್ತಿ ಹೊಂದಲು ಸಲ್ಲಿಸಿರುವ ಮನವಿಯನ್ನು ಹಿಂದಕ್ಕೆ ಪಡೆದಿರುವುದನ್ನು ಅಂಗೀಕರಿಸಿ, ಸದರಿ ಅಧಿಕಾರಿಯವರನ್ನು ಸರ್ಕಾರದ ಸೇವೆಯಲ್ಲಿ ಮುಂದುವರೆಸಲು ಸರ್ಕಾರವು ಒಪ್ಪಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು-2)

ಪಿ.ಆರ್. 2867

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಎ.ಸಿ. ಸುಬ್ಬುಸ್ವಾಮಿ, ನೋಟರಿ, ಬೆಂಗಳೂರು ಇವರ ಕರ್ತವ್ಯಲೋಪದ ದೂರು ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ :**
1. ಉಚ್ಚ ನ್ಯಾಯಾಲಯದ ಸಹಾಯಕ ರಿಜಿಸ್ಟ್ರಾರ್ ಇವರ ಪತ್ರ ಸಂಖ್ಯೆ : ಎಲ್‌ಸಿ.ಎ.ಐ.ಎಂಐಎಸ್‌ಸಿ 2007 ದಿನಾಂಕ : 03-10-2007.
2. ಸರ್ಕಾರದ ಪತ್ರ ಸಂಖ್ಯೆ : ಲಾ 206 ಎಲ್‌ಸಿಎಲ್ 2007 ದಿನಾಂಕ : 26-10-2007, 14-05-2008 ಮತ್ತು 21-12-2009.
3. ಶ್ರೀ ಎ.ಸಿ. ಸುಬ್ಬುಸ್ವಾಮಿ, ನೋಟರಿ, ಬೆಂಗಳೂರು ಇವರ ಲಿಖಿತ ಹೇಳಿಕೆ ದಿನಾಂಕ : 04-11-2009.
4. ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಪತ್ರ ಸಂಖ್ಯೆ : ಎಡಿಎಂ 1/ಬಿ/228/10 ದಿನಾಂಕ : 26/27-08-2010.

**ಪ್ರಸ್ತಾವನೆ:**

ಸಹಾಯಕ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ : 03-10-2007ರ ಪತ್ರದೊಂದಿಗೆ ಶ್ರೀ ಎ.ಸಿ. ಸುಬ್ಬುಸ್ವಾಮಿ, ನೋಟರಿ, ಬೆಂಗಳೂರು ರವರು ID No. 79/01ಕ್ಕೆ ಮಾಡಿಕೊಟ್ಟಿರುವ ಸಾಕ್ಷಿ ಪ್ರಮಾಣ ಪತ್ರದಲ್ಲಿ ಸಾಕ್ಷಿದಾರನ (deponent) ಸಹಿ ಇಲ್ಲದೆ ದೃಢೀಕರಿಸಿರುವುದರ ಬಗ್ಗೆ ಪ್ರಿಸೈಡಿಂಗ್ ಆಫೀಸರ್, 2ನೇ ಅಡಿಷನಲ್ ಲೇಬರ್ ಕೋರ್ಟ್ ಬೆಂಗಳೂರು, ಇವರಿಂದ ದಿನಾಂಕ : 26-07-2007ರಂದು ಸ್ವೀಕೃತವಾದ ದೂರು ಪತ್ರವನ್ನು ಸೂಕ್ತ ಕ್ರಮಕ್ಕಾಗಿ ಕಳುಹಿಸಿದ್ದರು. ಅದನ್ನು ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಕಳುಹಿಸಿ ನೋಟರಿಯವರ ಲಿಖಿತ ವಿವರಣೆ ಪಡೆದು ಅಭಿಪ್ರಾಯ ನೀಡುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ : 26-10-2007 ಹಾಗೂ 14-05-2008ರ ಸರ್ಕಾರದ ಪತ್ರದಲ್ಲಿ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ : 04-11-2009ರ ಮನವಿಯಲ್ಲಿ ಶ್ರೀ ಎ.ಸಿ. ಸುಬ್ಬುಸ್ವಾಮಿ, ನೋಟರಿ, ಬೆಂಗಳೂರು ಇವರು ಲಿಖಿತ ಹೇಳಿಕೆಯನ್ನು ಸಲ್ಲಿಸಿದ್ದು, ಸದರಿ ಹೇಳಿಕೆಯ ಪ್ರತಿಯನ್ನು ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಕಳುಹಿಸಿ ವಿಚಾರಣಾ ವರದಿಯನ್ನು ನೀಡುವುದರೊಂದಿಗೆ ಶ್ರೀಯುತರ ಪ್ರಮಾಣ ಪತ್ರದ ಅವಧಿ ಮುಗಿದಿದ್ದು, ಅವಧಿ ಮುಕ್ತಾಯಗೊಂಡ ನಂತರ ಪ್ರಮಾಣ ಪತ್ರವಿಲ್ಲದೆ ನೋಟರಿ ಕರ್ತವ್ಯ ನಿರ್ವಹಿಸಿರುವರೇ ಎಂಬ ಬಗ್ಗೆ 21-12-2009ರ ಸರ್ಕಾರದ ಪತ್ರದಲ್ಲಿ ಸ್ಪಷ್ಟೀಕರಣ ಕೋರಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ : 26/27-8-2010ರ ಪತ್ರದೊಂದಿಗೆ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ವಿಚಾರಣಾ ವರದಿ ಸಲ್ಲಿಸಿದ್ದು, ಶ್ರೀ ಎ.ಸಿ. ಸುಬ್ಬುಸ್ವಾಮಿ, ನೋಟರಿ, ಬೆಂಗಳೂರು ಇವರು ಪ್ರಮಾಣೀಕರ್ತನ ಸಹಿ ಇಲ್ಲದೆ ಪ್ರಮಾಣ ಪತ್ರವನ್ನು ದೃಢೀಕರಿಸಿಕೊಟ್ಟಿರುವುದು ಸಾಬೀತಾಗಿದ್ದು ಅವರ ಈ ತಪ್ಪನ್ನು ಹೊರತುಪಡಿಸಿದಂತೆ ಅವರ ಕರ್ತವ್ಯದ ಅವಧಿಯಲ್ಲಿ ಯಾವುದೇ ದೂರುಗಳು ದಾಖಲಾಗಿಲ್ಲದಿರುವುದರಿಂದ ಅವರ ಈ ತಪ್ಪನ್ನು ಉದಾರವಾಗಿ (lenient) ಪರಿಗಣಿಸಬೇಕೆಂಬ ಅಭಿಪ್ರಾಯ ಸಲ್ಲಿಸಿರುತ್ತಾರೆ.

ಕರ್ತವ್ಯ ಲೋಪದ ಪ್ರಮಾಣವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 206 ಎಲ್‌ಸಿಎಲ್ 2007 ಬೆಂಗಳೂರು, ದಿನಾಂಕ: 20ನೇ ನವೆಂಬರ್ 2010.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎ.ಸಿ. ಸುಬ್ಬುಸ್ವಾಮಿ, ನೋಟರಿ, ಬೆಂಗಳೂರು ಇವರಿಗೆ ಇನ್ನು ಮುಂದೆ ಇಂತಹ ತಪ್ಪುಗಳು ಪುನರಾವರ್ತನೆಯಾಗದಂತೆ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ತಿಳುವಳಿಕೆ ನೀಡಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(iii)ರನ್ವಯ ಎಚ್ಚರಿಕೆ ನೀಡಿ ಪ್ರಕರಣ ಮುಕ್ತಾಯಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 2868

## HORTICULTURE SECRETARIAT

**CORRIGENDUM**

**No. HCD 58 HPP 2010, Bangalore, Dated: 12-11-2010.**

In the Government Order No. AHD 153 HPP 2009, dated 02-03-2010 the entries in the operative portion and Annexure part of the Order shall be read as below :

| Sl.No. | Amount (Rs. In Lakhs) |
|---|---|
| | **Entries in table at para 2 :** |
| 1. | 83.49 instead of 84.10 |
| 2. | 74.94 instead of 74.34<br>25.06 instead of 25.66 |
| 3. | 150.51 instead of 149.90 |
| | **Entries in ANNEXURE appended to the Order :** |
| 1. | C.D.B. share 15.57 instead of 16.18 and Farmers share 31.76 instead of 31.15 |
| 3. | Total requirement 119.78 instead of 119.18 and State share 29.79 instead of 29.19 |
| 4(i) | Total requirement 6.6 instead of 7.2 and State share 4.8 instead of 5.4 |
| **Total** | CDB share 83.49 instead of 84.10 and Farmers share 150.51 instead of 149.90 |

By Order and in the name of the Governor of Karnataka

**B.C.Prakash**

Under Secretary to Government

Horticulture Department.

P.R. No. 2869

## ಶಿಕ್ಷಣ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ : ಇಡಿ : 378 : ಎಂಸಿಡಿ 2009 (ಭಾಗ), ಬೆಂಗಳೂರು, ದಿನಾಂಕ: 10ನೇ ನವೆಂಬರ್ 2010.**

**ವಿಷಯ :** ಸಾಕ್ಷರ ಭಾರತ 2012ರ ಕಾರ್ಯಕ್ರಮ ಅನುಷ್ಠಾನ ಕುರಿತು.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ : ಇಡಿ 378 ಎಂಸಿಡಿ 2009 (ಭಾಗ) ದಿನಾಂಕ : 23–10–2010 ಇಡಿ 123 ಸ್ಕೀಮರ (ಯೂನಿಕ್) 2010 ದಿನಾಂಕ : 23–10–2010.

ಉಲ್ಲೇಖಿತ ಸರ್ಕಾರದ ಆದೇಶದ ಭಾಗದಲ್ಲಿ ಲೆಕ್ಕ ಶೀರ್ಷಿಕೆ 2202–04–001–0–05 (ಯೋಜನೆ) ಎಂಬುದಾಗಿ ನಮೂದಿಸಿರುವುದರ

**ಬದಲಾಗಿ**

ಯೋಜನಾ ಲೆಕ್ಕ ಶೀರ್ಷಿಕೆ 2202–04–001–0–05–101 (ಸಹಾಯಾನುದಾನ) ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು. ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್.ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 2870

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ತಿದ್ದೋಲೆ**

**ಸಂಖ್ಯೆ : ಕಸಂವಾಪ್ರ 67 ಸ್ಮಾಪ್ರನಿ 10 ಬೆಂಗಳೂರು, ದಿನಾಂಕ: 03ನೇ ನವೆಂಬರ್ 2010.**

ದಿನಾಂಕ : 20–07–2010ರ ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 30 ಸ್ಮಾಪ್ರನಿ 2010ರ ಆದೇಶಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ದಿನಾಂಕ : 27–08–2010ರ ತಿದ್ದೋಲೆಯನ್ನು ರದ್ದುಗೊಳಿಸಿದೆ. ಅದರ ಬದಲಾಗಿ "ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರ ಮೂಲಕ ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಿದೆ ಎಂದು ತಿದ್ದಿ ಓದಿಕೊಳ್ಳುವುದು" ಹಾಗೂ ಈ ಬಗ್ಗೆ ಎನ್.ಎಂ.ಸಿ. ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

ಪಿ.ಆರ್. 2871